

ಕೊರವಂಜಿಗೆ ಲಕ್ಷಣ್ ಬರೆದ ವ್ಯಂಗ ಚಿತ್ರ

ಶುಭಾಶಗಳೊಂದಿಗ

**ವಿಜಯಾ ಮತ್ತು ಆನಂದ್ ದೇಸಾಯ್**

ಆಸ್ಟಿನ್, ಟೆಕ್ಸಸ್




ಗೌರವ ಸಲಹೆಗಾರರು:
ಶ್ರೀ ಅ. ರಾ. ಸೇ.
ಶ್ರೀ ಶೇಷಗಿರಿ
ಸಂಪಾದಕ:
ಶಿವಕುಮಾರ್
ನಿರ್ವಹಣೆ:
ಬೇಲೂರು ರಾಮಮೂರ್ತಿ
ಕೃಷ್ಣ ಸುಬ್ಬರಾವ್

ಚಂದಾ ವಿವರ:
ಬಿಡಿ ಪ್ರತಿ: ರೂ. 30.00
ವಾರ್ಷಿಕ ಚಂದಾ: ರೂ. 60
ಆಜೀವ ಚಂದಾ : ರೂ. 500

ವಿಳಾಸ : ಅಪರಂಜಿ ಕಾರ್ಯಾಲಯ, 36, 6ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)


# ಮೊದಲ ಮಾತು

ಜನವರಿ 1999ರ ಈ ಸಂಚಿಕೆ ಹಾಸ್ಯೋತ್ಸವ-98 ರಂದು ಬಿಡುಗಡೆಯಾಗುತ್ತಿದೆ. ಈ ಉತ್ಸವವನ್ನು ರಾಶಿ ಹಾಗೂ ರತ್ನರ ಸಂಸ್ಮರಣೆ ಎಂದು ಹೆಸರಿಸಿ ಈ ಇಬ್ಬರು ಮಹನೀಯರ ಕೃತಿಗಳು, ಜೀವನ ಶೈಲಿ, ಪಾಲಿಸಿಕೊಂಡು ಬಂದ ಮೌಲ್ಯಗಳು ಇವುಗಳ ಕುರಿತು ಉಪನ್ಯಾಸಗಳನ್ನು ಈ ಸಮಾರಂಭದಲ್ಲಿ ಯೋಜಿಸಲಾಗಿದೆ. ಅಂತೆಯೇ ಈ ವಿಶೇಷಾಂಕದಲ್ಲಿಯೂ ಸಹಾ ಅನೇಕ ಹಿರಿಯ ತಲೆಮಾರಿನ ಲೇಖಕರು ರಾಶಿ ಮತ್ತು ರತ್ನರ ಬಗ್ಗೆ ಹಾಗೂ ಅವರಿಬ್ಬರ ಗಾಢ ಸ್ನೇಹದ ಬಗ್ಗೆ ತಮ್ಮ ನೆನಪುಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಅಪರಂಜಿಗೆ ಹೆಚ್ಚು ಪ್ರಚಾರ ಸಿಗಲಿ, ಹೆಚ್ಚು ಹೆಚ್ಚು ಜನ ಸಂಚಿಕೆಯನ್ನು ಓದುವಂತಾಗಲಿ ಎಂಬ ಉದ್ದೇಶದಿಂದ ಪ್ರತಿ ವರ್ಷ ಯುಗಾದಿಯಂದು ಹೊರಬರುತ್ತಿದ್ದ ಈ ವಿಶೇಷಾಂಕವನ್ನು ಈ ಬಾರಿ ಹಾಸ್ಯೋತ್ಸವದಂದು ಬಿಡುಗಡೆ ಮಾಡಲು ನಿರ್ಧರಿಸಿದೆವು. ಈ ಸಂಚಿಕೆ ಸಕಾಲಕ್ಕೆ ಸಿದ್ಧವಾಗಲು ಅನೇಕ ಮಂದಿ ಕಳೆದ ಹಲವಾರು ವಾರಗಳಿಂದ ಶ್ರಮಿಸಿದ್ದಾರೆ. ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿರುವ ಕೃಷ್ಣ ಸುಬ್ಬರಾವ್ ಮತ್ತು

ಬೇಲೂರು ರಾಮಮೂರ್ತಿ ಇವರುಗಳು ಹಾಸ್ಯೋತ್ಸವದ ಕೆಲಸಗಳ ಜೊತೆಗೇ ಈ ಸಂಚಿಕೆಯ ತಯಾರಿಯ ಜವಾಬ್ದಾರಿಯನ್ನೂ ಬಹು ಸಂತೋಷದಿಂದ ಭರಿಸಿದ್ದಾರೆ. ಜಾಹಿರಾತು ಸಂಗ್ರಹಣೆಯ ಕೆಲಸದಲ್ಲಿ ರಾಜಗೋಪಾಲ್ ಮತ್ತು ಅವರ ಅಪಾರ ಮಿತ್ರವೃಂದ ನೀಡಿರುವ ಸಹಕಾರ ನಿಜಕ್ಕೂ ಮರೆಯಲಾಗದಂತಹುದು. ಮುದ್ರಣದ ಕ್ಷೇತ್ರದಲ್ಲಿ, ಡಿ.ಟಿ.ಪಿ. ಕೆಲಸ ನಿರ್ವಹಿಸಿದ ಒಮೇಗ ಲೇಜರ್‌ಟೆಕ್‌ನ ರವಿ, ರವಿ ಗ್ರಾಫಿಕ್ಸ್‌ನ ವಿ.ಆರ್. ನಾಥ್ ಬಹು ಮುತುವರ್ಜಿಯಿಂದ ಕಾರ್ಯ ನಿರ್ವಹಿಸಿ ಸಂಚಿಕೆಯ ಅಂದವನ್ನು ಹೆಚ್ಚಿಸಿದ್ದಾರೆ.

ಎಲ್ಲ ಗ್ರಾಫಿಕ್ ಕೆಲಸಗಳನ್ನು ಉದಯೋನ್ಮುಖ ಕಲಾವಿದ ಬಾಗೂರು ಮಾರ್ಕಂಡೇಯನಿಗೆ ವಹಿಸಿ ಕೊಟ್ಟಿದ್ದೆ. ಚಿತ್ರ ರಚನೆಯನ್ನು ಚೆನ್ನಾಗಿ ನಿರ್ವಹಿಸಿರುವ ಈ ಚಿರಂಜೀವಿಗೆ ಅಪರಂಜಿಯ ಕೃತಜ್ಞತೆಗಳು.

ಪತ್ರಿಕೆ ನಿಮ್ಮ ಕೈಯಲ್ಲಿದೆ. ಓದಿ ಅಭಿಪ್ರಾಯ ಬರೆದು ತಿಳಿಸಿದರೆ ಅಪರಂಜಿ ನಿಮಗೆ ಅಭಾರಿ.

ನಗೆಗನ್ನಡಂ ಗೆಲ್ಗೆ

- ಶಿವಕುಮಾರ್

## ಥಳುಕು – ತುಣುಕು

**ಪಿಟೀಲನ್ನು ಐವತ್ತು ರೂಪಾಯಿಗೆ ಮಾರಿದಕಣೋ**

**ಗೊತ್ತಾಯ್ತೊ?... ಪಕ್ಕದ ಮನೆಯವರು**

**ಕೊಂಡುಕೊಂಡಿರಬೇಕು.**

# ಈ ಸಂಚಿಕೆಯಲ್ಲಿ

ಸಂಪುಟ 16 ಜನವರಿ 99 ಸಂಚಿಕೆ-4



ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3 ಅಕ್ಷರ ಜೋಡಣೆ: ಒಮೇಗಾ ಲೇಸರ್ ಟೆಕ್, ಬೆಂಗಳೂರು 27



# ಅಪರಂಜಿ

## (ತಿಳಿನಗೆಯ ಕಾರಂಜಿ)

ಸಂಪುಟ 16 ಜನವರಿ 99 ಸಂಚಿಕೆ-4

### ಅನಾಕಾಶಮಸಂಗಂ - ಬೃಹದಾರಣ್ಯಕ

ಬ್ರಹ್ಮವು ಆಕಾಶಕ್ಕಿಂತ ಸೂಕ್ಷ್ಮ. ಅದು ಅನಾಕಾಶ. ಎಂದರೆ, ಅದರಲ್ಲಿ ಅದನ್ನು ಬಿಟ್ಟು ಇನ್ನೇನೂ ಇಲ್ಲ. ಭೂತಾಕಾಶವು ಅವಕಾಶ. ಅದರಲ್ಲಿ ತೋರುವುದೆಲ್ಲ ನಾಶವಾಗುತ್ತದೆ. ಬ್ರಹ್ಮವೆಂಬ ಪರಮಾಕಾಶಕ್ಕಾದರೋ ಯಾವುದರ ಲೇಪ (ಸಂಗ)ವೂ ಇಲ್ಲ ಎಂದು ಉಪನಿಷತ್ತು ಹೇಳುತ್ತದೆ.

ಇದೆಲ್ಲಾ ಯಾರಿಗೆ ಬೇಕು. ಇದನ್ನು ಯಾರೂ ಓದುವುದಿಲ್ಲ ಎಂದು ಹೇಳುವವರೇ ಬಹುಸಂಖ್ಯಾತರು. ರಾಜಕೀಯದಲ್ಲಿದ್ದಂತೆ ಧರ್ಮದಲ್ಲೂ ಸ್ವೇಚ್ಛಾಚಾರಕ್ಕೆ ಎಲ್ಲಿ ಹೆಚ್ಚು ಅವಕಾಶವಿದೆಯೋ ಅದಕ್ಕೆ ಬಹುಮತ. ವಸ್ತು ತತ್ತ್ವ ವಿಚಾರವಿರುವುದು ಧರ್ಮ. ವಿಚಾರವಿಲ್ಲದ ಬರಿಯ ನಂಬಿಕೆಯೇ ಮತ. ರಾಜಕೀಯದಲ್ಲಿ ಇದರ ಚಲಾವಣೆ ಹೆಚ್ಚು. ಧರ್ಮದಲ್ಲೂ ಅಷ್ಟೆ. ಮತಗಳೆಲ್ಲಾ ಧರ್ಮಗಳೆಂದು ಬುಡುಬುಡಿಕೆ. ನೀನು ಹೇಗೆ ಬೇಕಿದ್ದರೂ ಇರಬಹುದು ನಾವು ನಿನ್ನನ್ನು ರಕ್ಷಿಸುತ್ತೇವೆ ಎಂಬ ಅಭಯದಾನ ಉಭಯತ್ರ. ತಮ್ಮದೇನು ಎಂಬರಿವಿಲ್ಲ. ಮನೆಮುರುಕ ಆತ್ಮಹನೋಜನರ ಮಾತಿಗೆ ಎಲ್ಲಲ್ಲೂ ಪ್ರಾಧಾನ್ಯ.

ಅವರಿಗೆ ದೇಹದಲ್ಲಾಗಲಿ ಜೇಬಿನಲ್ಲಾಗಲೀ ಆಕಾಶವಿಲ್ಲ. ಅಭಕ್ಷ್ಯಗಳು, ಅಪೇಯಗಳು, ಅಧರ್ಮದಿಂದ ಗಳಿಸಿದ್ದು ಅಲ್ಲಿನ ಆಕಾಶವನ್ನೆಲ್ಲಾ ತುಂಬಿದೆ. ತಮಗೆ ಮತಕೊಟ್ಟವರು, ಅಡ್ಡ ಬಿದ್ದವರ ಸಂಗವೇ ಅವರಿಗಿಲ್ಲ. ಸತ್ಯ, ಧರ್ಮಗಳ ಸಂಗವಿಲ್ಲ. ಸದಾಚಾರದ ಸಂಗವಿಲ್ಲ.

ಹೀಗೇ ನಾವು ಮ್ಲೇಚ್ಛರ ಇಪ್ಪತ್ತನೇ ಶತಮಾನ ಒಂದು ದೊಡ್ಡ ಮೈಲಿಗಲ್ಲೆಂದು ನಂಬಿದ್ದೇವೆ. ಸರ್ವಭಕ್ಷಕರಾದ ವಿಜ್ಞಾನಾಸುರರನ್ನು ಬಾಡಿಗೆಗಿಟ್ಟುಕೊಂಡವರು ಒಳ್ಳೆಯದೆಂಬುದೇ ಇಲ್ಲದಂತೆ ಮಾಡಲು ಹೊರಟಿದ್ದಾರೆ.

ಹೇ ಅಸುರಾರೀ ರಕ್ಷಿಸು ಎಂದು ಅಪರಂಜಿಯು ಮೊರೆಯಿಡುತ್ತಿದ್ದಾಳೆ.



○ ಪ್ರಕಾಶ್

ಕೃಪಾಂಕಕ್ಕಾಗಿ ಗ್ರಾಮೀಣ ವಿದ್ಯಾರ್ಥಿಗಳ ಆಗ್ರಹ; ಪ್ರತಿಭಟನೆ

- ಸುದ್ದಿ

ಛಲದಂಕಮಲ್ಲರು!!!

☆☆☆

ಸುಂದರ ಕನ್ನಡ ಭವನ ನಾಡಿಗೆ ಸಮರ್ಪಣೆ

- ಪತ್ರಿಕೆ

ಹೊಟ್ಟೆಗೆ ಹಿಟ್ಟಿಲ್ಲ......!!

☆☆☆

ಮಾನ್‌ಸಾಂಟೋ ಕಂಪೆನಿಯಲ್ಲಿ ಬೀಜಾಂತಕ ಅಂಶಗಳಿಲ್ಲ

- ಹೇಳಿಕೆ

'ಕ್ಲಿಂಟನ್' ದೇಶದ ಬೀಜಾಸುರರನ್ನು ನಂಬುವುದು ಹೇಗೆ?

☆☆☆

ದತ್ತ ಪೀಠದ ವಿವಾದ; ಪೋಲೀಸ್ ಕಾವಲಿನಲ್ಲಿ ಪೂಜೆ

- ಪತ್ರಿಕೆ

ದೇವರು ನಡುಗಿದನಂತೆ!!

☆☆☆

ಈರುಳ್ಳಿಯ ದೆಸೆಯಿಂದ ಜಿ.ಜೆ.ಪಿ. ಪಕ್ಷದ ಮುಖಂಡರೆಲ್ಲ ಕಣ್ಣೀರು ಸುರಿಸಿದರಂತೆ!!

★★★

ತಾಂತ್ರಿಕ ದೋಷ; ರಾಜ್ಯದ ಹಲವೆಡೆ ವಿದ್ಯುತ್ ವ್ಯತ್ಯಯ
- ಪತ್ರಿಕೆ

**ಓಹೋ! ನಾವು ಬರೀ ಶಟ್‌ಡೌನ್ ಅಂದುಕೊಂಡಿದ್ದೆವು!!**

★★★

ಅಕ್ರಮ ದಾಸ್ತಾನುಗಾರರ ವಿರುದ್ಧ ಕಠಿಣ ಕ್ರಮ; ಪ್ರಧಾನಿ ಎಚ್ಚರಿಕೆ
- ಸುದ್ದಿ

**ಸಕ್ರಮ ದಾಸ್ತಾನುಗಾರರೂ ಇದ್ದಾರೇ??**

★★★

ಭ್ರಷ್ಟಾಚಾರ ರಹಿತ ಆಡಳಿತಕ್ಕೆ ಯತ್ನ; ಹುಚ್ಚಪ್ಪ ಸಂತೃಪ್ತಿ
- ಸುದ್ದಿ

**ಅರ್ಥವಾಯಿತು!!**

★★★

ಐವರು ಸಚಿವರು, 83 ಶಾಸಕರಿಂದ ಆಸ್ತಿ ವಿವರ ಸಲ್ಲಿಕೆ ಇಲ್ಲ
- ಲೋಕಾಯುಕ್ತ

**ಜನಸೇವೆಯಲ್ಲಿ ನಿರತರಾಗಿದ್ದರಿಂದ ಕಾಲ ಸಿಗದೆ ಇರಬಹುದು!!**

★★★

ತಾಜ್‌ಮಹಲ್ ಉತ್ತಮ ವಾಸ್ತುಶಿಲ್ಪವಲ್ಲ
- ಶ್ರೀ ಜೇತ್‌ಮಲಾನಿ

**ಜೇತ್‌ಮಲಾನಿಯೆಂಬ ಎಂಟನೇ ಅದ್ಭುತವನ್ನು ನೋಡಿ ಅಪರಂಜಿ ನಸುನಕ್ಕಳಂತೆ!!**

★★★

# ರತ್ನರಾಶಿ

– ಡಾ॥ ಹೆಚ್.ಕೆ. ರಂಗನಾಥ್

ಜಿ.ಪಿ. ರಾಜರತ್ನಂ (ರತ್ನ), ಡಾ॥ ಶಿವರಾಮ್ (ರಾ.ಶಿ.); ಆದ್ಯ ರಂಗಾಚಾರ್ಯ (ಶ್ರೀರಂಗ) ಕೂಡಿದರೆಂದರೆ ಮಾತೆಲ್ಲ ಮುತ್ತು-ರತ್ನ-ಹವಳ, ಅವರೊಂದಿಗೆ ಅಕಸ್ಮಾತ್ ನಾ.ಕಸ್ತೂರಿಯವರೂ (ನಾ.ಕ.) ಸೇರಿದರೆ ಹೊನ್ನಸರದಲ್ಲಿ ಕೆಂಪು ಹವಳವನ್ನು ಕೋದಂತೆ. ನಗೆಯ ಹೊಳೆ. ಬಡವರ ಪಾಲಿಗೆ ರತ್ನರಾಶಿ ಅಥವಾ ರಾಶಿರತ್ನ. ಇನ್ನು ಇವರೊಂದಿಗೆ ಕೈಲಾಸಂ ಅವರೂ ಜೊತೆಗೂಡಿದರೆಂದರೆ, ಆಕಾಶ ಪಾತಾಳಕ್ಕೆ ಕಳಚಿ ಬೀಳಬೇಕು. ಅಂಥ ಸಂದರ್ಭಗಳನ್ನು ಕುರಿತು ಕೇಳಿದ್ದೆ. ಅದು ನನ್ನ ಪಾಲಿಗೆ ಒದಗಿ ಬರಲಿಲ್ಲ. ಆದರೆ ಮೊದಲಿನ ಶಿಷ್ಟ-ಚತುಷ್ಟಯವನ್ನು ಒಟ್ಟಿಗೇ ಕಂಡಿದ್ದೇನೆ; ಅವರ ಸಂಭಾಷಣೆಯ ಸವಿಯನ್ನು ಉಂಡಿದ್ದೇನೆ; ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದೇನೆ; ತಿಳಿವನ್ನು ಬೆಳೆಸಿಕೊಂಡಿದ್ದೇನೆ.

ಮೈಸೂರು ಆಕಾಶವಾಣಿ ಬೆಂಗಳೂರಿಗೆ ಬದಲುಗೊಂಡ ಮೊದಲು ವರ್ಷದಲ್ಲಿ ಗೋಮಟೇಶ್ವರನ ಮಹಾಮಸ್ತಕಾಭಿಷೇಕದ ಸಂದರ್ಭ. ಅಂಥದೊಂದು ಮಹತ್ ಕಾರ್ಯಕ್ರಮದ ತೇಜಸ್ಸು-ಓಜಸ್ಸುಗಳನ್ನು ವೀಕ್ಷಕ ವಿವರಣೆಯ ಮೂಲಕ ಕನ್ನಡ ನಾಡಿನ ಉದ್ದಗಲದಲ್ಲಿ ಮೊಳಗಿಸಬೇಕೆಂಬುದು ನಿಲಯದ ಅಂದಿನ ನಿರ್ದೇಶಕ ಡಾ॥ ನಟೇಶ್ ಅವರ ಸಂಕಲ್ಪ. ಅದಕ್ಕಾಗಿ ಅವರು ದಿಲ್ಲಿಯ ಸಚಿವಾಲಯವನ್ನೇ ಅಲುಗಾಡಿಸಿದರು. ಶ್ರವಣಬೆಳಗೊಳಕ್ಕೆ ನಾಲ್ಕಾರು ಸಲ ಅಡ್ಡಾಡಿದರು. P.W.D. ಮತ್ತು ವಿದ್ಯುತ್ ಇಲಾಖೆಗಳನ್ನು ಚುರುಕುಗೊಳಿಸಿದರು. ಅಲ್ಲಿನ ಮಠದ ಸ್ವಾಮಿಗಳನ್ನು ಪ್ರಚೋದಿಸಿದರು. ಅಂತಹ ದೊಡ್ಡ ಜನಸಂಮೋಹದಲ್ಲಿಯೂ ಆಕಾಶವಾಣಿಯ ಸಿಬ್ಬಂದಿಗಾಗಿ ವಿಶೇಷ ಸವಲತ್ತುಗಳ ವ್ಯವಸ್ಥೆ ಮಾಡಿಸಿದರು. ಈ ಎಲ್ಲವೂ ಸಿದ್ಧಗೊಳ್ಳುವಲ್ಲಿಗೆ ಮಹೋತ್ಸವ ಹತ್ತಿರವಾಯಿತು. ಈ ಎಲ್ಲ ಏರ್ಪಾಡುಗಳಿಗೆ ಕಲಶವಿಡುವಂತೆ ಮಾತುಗಾರನೊಬ್ಬನ ವೀಕ್ಷಕ ವಿವರಣೆ ಆಗಬೇಕು. ಆತ ವಿದ್ವಾಂಸನೂ, ಮಾತುಗಾರನೂ, ಸೂಕ್ಷ್ಮಗ್ರಾಹಿ ಪ್ರತ್ಯಕ್ಷ ವೀಕ್ಷಕನೂ ಆಗಿರಬೇಕು. ಆಕಾಶವಾಣಿಯ ವಿಶೇಷ ಸಭೆಯಲ್ಲಿ ಚರ್ಚೆ. ನಾಲ್ಕೆಂಟು ಹೆಸರುಗಳ ಕುಣಿದಾಟ. ಕಡೆಗೆ ಗಟ್ಟಿಯಾಗಿ ನಿಂತದ್ದು ರಾಜರತ್ನಂ ಅವರ ಒಂದೇ ಹೆಸರು. ಘನವಾದ ವಿದ್ವತ್ತು, ಜೈನ-ಬೌದ್ಧ ಧರ್ಮಗಳ ತಲಸ್ಪರ್ಶೀ ತಿಳಿವಳಿಕೆ, ಕಂಚಿನಂತಹ ಸಿರಿಕಂಠ ಮಾತಿನ ಮಲ್ಲತನ, ಕನ್ನಡ ನಾಡು-ನುಡಿ, ಇತಿಹಾಸ, ಸಂಸ್ಕೃತಿಗಳ ಸಂಕೇತ

ಪುರುಷ ಅಲ್ಲದೆ ಇಂತಹ ವಿಶೇಷ ಸಂದರ್ಭದಲ್ಲಿ ಅಗತ್ಯವಾದ ಪ್ರಸಂಗಾವಧಾನದ ಅಧ್ವರ್ಯು-ಇಂಥವರು ಬೇರೆ ಯಾರು? ಆಕಾಶವಾಣಿಯನ್ನೇ ಪಣಕ್ಕೆ ಹೆಚ್ಚುವ ಇಂಥ ಸಾಹಸದಲ್ಲಿ ಗೆಲ್ಲಬಲ್ಲವರು ರಾಜರತ್ನಂ ಒಬ್ಬರೇ, ಎಂಬುದು ಒಟ್ಟು ಸಭೆಯ ಒಮ್ಮತದ ನಿರ್ಣಯ. ಉತ್ಸವಕ್ಕೆ ಇನ್ನು ಎಂಟೇ ದಿನ. ರಾಜರತ್ನಂ ಊರಿನಲ್ಲಿ ಇರಲಿಲ್ಲ. ಅವರನ್ನು ಹುಡುಕಿಸಿ ತದುಬಿ ಕರೆತರಲು ಮಾಡಿದ ಸಾಹಸ ಸಣ್ಣದಲ್ಲ. ಇನ್ನು ನಾಲ್ಕುದಿನ ಎನ್ನುವಲ್ಲಿ ರಾಜರತ್ನಂ ಊರಿಗೆ ಮರಳಿದರು. ವಿಷಯ ತಿಳಿದು ಹರ್ಷದಿಂದ ಒಪ್ಪಿದರು. ಅಂಥದೊಂದು ಮಹಾನ್ ಸಂಭ್ರಮದ ಪ್ರಾತ್ಯರ್ಷಿಕ ವರದಿಗಾಗಿಯೇ ಜನ್ಮ ತಳೆದರೇನೋ ಎನ್ನುವಂತೆ ಮೂರು ತಾಸುಗಳ ಅವಧಿಯನ್ನು ತಮ್ಮ ಧೀರ ಗಂಭೀರ ಧ್ವನಿಯಿಂದ ತುಂಬಿ ವಿಜೃಂಭಿಸಿದರು; ಮನೆ ಮನೆಯಲ್ಲಿಯೂ ಕೇಳಿದವರ ಮನ-ಮನದಲ್ಲಿಯೂ ಮಹೋತ್ಸವದ ವಿವರಗಳನ್ನು ಕಡೆದು ನಿಲ್ಲಿಸಿದರು. - ನಭೂತೋನ ಭಷ್ಯತಿ!

ಇಂಥ ಅತ್ಯಂತ ಗಾಢವಾದ ಪರಿಣಾಮವನ್ನು ದೂರದರ್ಶನವಿಲ್ಲದ ಆ ಒಂದು ಕಾಲದಲ್ಲಿ ಕೇಳುಗನ ಮನದಲ್ಲಿ ಅಚ್ಚೊತ್ತಿ ನಿಲ್ಲಿಸಿದ ಮತ್ತೊಂದು ಸಂದರ್ಭ ಹೃದಯ ವಿದ್ರಾವಕವಾದ ದುರಂತ ಸಂದರ್ಭ - ಎಂದರೆ ಗಾಂಧೀಜಿಯವರ ಶವಯಾತ್ರೆಯನ್ನು ರಾಷ್ಟ್ರಕ್ಕೆ ಮನೆ ಮನೆಗಳಲ್ಲಿ ಪ್ರತ್ಯಕ್ಷೀಕರಿಸಿದ ಮೆಲ್‌ವಿಲ್-ಡಿ ಮೆಲೋ ಅವರ ವೀಕ್ಷಕ ವರದಿ. ಈ ಎರಡು ಸಂದರ್ಭಗಳನ್ನು ಹೋಲಿಸಲು ಬಾರದು. ಮೊದಲನೆಯದು ಮಹತ್ ಸಂಭ್ರಮದ ವರದಿ; ಎರಡನೆಯದು ಮಹಾದುರಂತದ ವೀಕ್ಷಣವ್ಯಾಖ್ಯಾನ. ಆದರೆ ಎರಡೂ ಸಂದರ್ಭಗಳಲ್ಲಿ ಕೇಳುಗನ ಮೇಲೆ ಅಳಿಸಲಾಗದ ಪರಿಣಾಮ ಮಾಡಿದವರು ಇಬ್ಬರು ಅತ್ಯಂತ ಪ್ರತಿಭಾವಂತ ವೀಕ್ಷಣವಾಗ್ಮಿಗಳು; ತಮ್ಮ ಸ್ವಂತ ಕಣ್ಣುಗಳನ್ನು ಕೇಳುಗರಿಗೆ ಕೊಟ್ಟವರು.

ಕನ್ನಡದ ರಾಜ; ಕನ್ನಡದ ರತ್ನ ಎಂದು ಡಿ.ವಿ.ಜಿ. ಅವರಿಂದ ಹೊಗಳಿಸಿಕೊಂಡ ರಾಜರತ್ನಂ ಅವರ ವಿದ್ಯಾರ್ಥಿ ಸಂಮೋಹದಲ್ಲಿ ಒಬ್ಬನಾದ ನನ್ನಂಥವನ ಭಾಗ್ಯ ದೊಡ್ಡದು. ರಂಗನಾಟಕಗಳಲ್ಲಿ ಅವರೊಂದಿಗೆ ಪಾತ್ರ ವಹಿಸಿ ಮೂಡಿಸಿಕೊಂಡ ತಿಳಿವು ಇನ್ನೂ ದೊಡ್ಡದು. 'ಯೆಂಡ್ಕುಡಕ ರತ್ನ'ನ ಒಂದೇ ಪದವನ್ನು ಹೇಳಲಿ, 'ಪಾತು - ತೌರ್ಮನೆ'ಯಲ್ಲಿನ ನರಸಿಂಹಯ್ಯ ಅಥವಾ 'ನೆರೆಹೊರ್ಕೆ'ಯಲ್ಲಿನ ವಿತಂತುವಿನ ಪಾತ್ರ ಮಾಡಲಿ, ಬಾಣನ 'ಕಾದಂಬರಿ'ಯನ್ನು ಕುರಿತು ಬೋಧಿಸಲಿ, ಸಾಹಿತ್ಯ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡಲಿ, ಸ್ನೇಹಿತರ ಬಳಗದಲ್ಲಿ ಮಾತುಕತೆಯಾಗಲಿ,

ಪುಟಾಣಿಗಳೊಂದಿಗೆ ಕುಳಿತು ಹರಟೆಯ ಕಟ್ಟು ಬಿಚ್ಚಲಿ, ರಾಜರತ್ನಂ ಅವರ ವೈಶಿಷ್ಟ್ಯವೇ ವೈಶಿಷ್ಟ್ಯ. ಅವರ ಧ್ವನಿಯಂತೂ ಅತಿ-ಮಾನವ ಧ್ವನಿ. ಉಗ್ಗಡಿಸಿದಾಗ ಮೊಳಗು; ಉಪದೇಶಿಸಿದಾಗ ಮೃದು-ಮಧುರ. ಇನ್ನು ಅವರ ವಿನೋದ ಪ್ರಜ್ಞೆಯಂತೂ ಅತಿ ಮೋಹಕ. 'ಹಂಸಕ್ಷೀರ' ನ್ಯಾಯದ ಬಗೆಗೆ ಅವರ ವ್ಯಾಖ್ಯಾನವನ್ನು ತಾವು ಕೇಳಿರಬೇಕು - 'ನೀರು ಬೆರೆಸಿದ ಹಾಲನ್ನು ಹಂಸದ ಮುಂದೆ ಇಟ್ಟರೆ, ಅದು ಎಲ್ಲವನ್ನೂ ಒಟ್ಟಿಗೆ ಹೀರಿಕೊಂಡು, ಸ್ವಲ್ಪ ಕಾಲದ ನಂತರ ನೀರನ್ನು ಮಾತ್ರ ಬಿಡುತ್ತದೆ' ಎಂಬುದು ಅವರ ವ್ಯಾಖ್ಯೆ!!

ರಾಜರತ್ನಂ ಅವರ ದೇಹ, ಧ್ವನಿ, ಮರೆಯಾದೀತು ಆದರೆ ಅವರನ್ನು ಕಂಡವರ, ಕೇಳಿದವರ, ಓದಿದವರ ಮನಸ್ಸಿನಲ್ಲಿ ಅವರು 'ಚಿರಂಜೀವಿ'.

ರಾಜರತ್ನಂ ಅವರ ಬಳಗದಲ್ಲಿದ್ದವರು ಡಾ|| ಎಂ. ಶಿವರಾಮ್ ಅಥವಾ ಸಾಹಿತ್ಯಾಸಕ್ತರಿಗೆ 'ರಾ.ಶಿ.' ವೇಷ-ಭೂಷಣಗಳಲ್ಲಿ ರಾಜರತ್ನಂ ಬೌದ್ಧಭಿಕ್ಷು; ರಾ.ಶಿ. ಯವರು 'ಏಬ್ರಹಾಂ ಲಿಂಕನ್' ಶಾರ್ಕಸ್ಕಿನ್‌ನ ತ್ರೀ ಪೀಸ್ ಸೂಟ್, ಸ್ಟಾರ್ಚ್ ಹಾಕಿದ ಶರ್ಟು, Bow ಹಾಕಿದ ನೆಕ್-ಟೈ- ಹೀಗೆ ಬಹಿರಂಗ ಬೇರೆ ಬೇರೆ ಎನಿಸಿದರೂ ಅದರಲ್ಲಿನ ಅಂತರಂಗದ ಸಂಸ್ಕೃತಿ ಅಪ್ಪಟ ಆರ್ಕ್ಷೇಯ; ಅಪ್ಪಟ ಭಾರತೀಯ.

ಬೆಂಗಳೂರು ಆಕಾಶವಾಣಿಗೆ ಬಂದಾಗ ನನಗೆ ಮೂವತ್ತೇಳು. ಅಷ್ಟರಲ್ಲಿ ರಾ.ಶಿ.ಯವರ ಬಗೆಗೆ ಕೇಳಿದ್ದೆ, ಅವರು ಬರೆದುದನ್ನು ಓದಿದ್ದೆ, ಅವರ ವಿನೋದಪ್ರಜ್ಞೆಗೆ ಒಲಿದು ಓಲಾಡಿದೆ. ಕಾಣುವ ತವಕ. ನಾಲ್ಕಾರು ತಿಂಗಳ ನಂತರ ಏನೋ ನೆಪ ಮುಂದು ಮಾಡಿಕೊಂಡು ಮೊದಲ ಬಾರಿಗೆ ಕಂಡಾಗ ಸಿಂಹವನ್ನು ಕಂಡಂತೆ ಸ್ವಲ್ಪ ಭಯ. ಬಳಕೆ ಬೆಳೆದಂತೆ ಅವರ ಅಂತರಂಗದ ಮಧು-ಮಾಧುರ್ಯದ ಪರಿಚಯ. ಆನಂತರ ಯಾವಾಗಲೂ ನಗೆಯುತ್ಸವ. ಸಲುಗೆ ಬೆಳೆದರೂ, ಅವರು ಯಾವಾಗ ನಗೆಯಾಡುತ್ತಾರೆ? ಯಾವಾಗ ಗಾಂಭೀರ್ಯ ತಳೆಯುತ್ತಾರೆ ಎಂಬುದರ ನೇಮವಿಲ್ಲ ಆದರೂ ನನ್ನಂಥ ಕಿರಿಯನ ಬಗೆಗೆ ಅವರು ತೋರಿದ ಸ್ನೇಹ ವಿಶ್ವಾಸಗಳನ್ನು ಮರೆಯುವಂತಿಲ್ಲ. ಸೂಕ್ಷ್ಮ ಸಂವೇದನೆ ಹಾಗೂ ಸೂಕ್ಷ್ಮ ಸಂಶೋಧನೆಯ ಫಲ, ಅವರ 'ಮನೋನಂದನ' ಆದರೆ ಅವರ ಒಳಗು-ಹೊರಗುಗಳನ್ನು ಗಾಢವಾಗಿ ತುಂಬಿಕೊಂಡದ್ದು ವಿನೋದ ಪ್ರವೃತ್ತಿ; ಅವರ ವೃತ್ತಿಯ ಆಧಾರವೂ ಅದೇ. ಅನಾರೋಗ್ಯದಿಂದ ಬಳಲುತ್ತ ಬಂದವರ ದೇಹಸ್ಥಿತಿಗೆ ತಕ್ಕಂತೆ, ಮೊದಲಿಗೆ ನಗೆಯ ಔಷಧ, ನಂತರ ದೇಹ ಮನಸ್ಸುಗಳ ಪರೀಕ್ಷಣ, ಆಮೇಲೆ ಆತನ ಜಡ್ಡಿನ

ಬಗೆಗೆ ಮಗುವಿಗೆ ತಿಳಿಸಿ ಹೇಳುವಂತಹ ಬೋಧನ. ಆವಶ್ಯಕವೆನಿಸಿದ ಔಷಧ ಮತ್ತು ಅದರ ಇತಿಮಿತಿಗಳ ಬಗೆಗೆ ದೃಷ್ಟಾಂತಗಳೊಡನೆ ಧೈರ್ಯ ತುಂಬುವ ನಿರೂಪಣೆ. ಈ ಕಾಲದ ಗಡಿಬಿಡಿಯ ವೈದ್ಯರಿಗೆ ಇಂತಹ ವ್ಯವಧಾನ ಹೇಗೆ ತಾನೆ ಸಾಧ್ಯ? ರಾ.ಶಿ.ಯವರ ಚಿಕಿತ್ಸಾಲಯದಲ್ಲಿಯೂ ಜನಜಂಗುಳಿ. ನಗೆಯಿಂದ ನೋವನ್ನು ಶಮನಗೊಳಿಸುವ ಚಿಕಿತ್ಸಾ ವಿಧಾನದಲ್ಲಿ ಸಿದ್ಧಹಸ್ತರಾದ ರಾ.ಶಿ.ಯವರು 'ಇದ್ದರೆ ಇಂತಹ ವೈದ್ಯ ಇರಬೇಕು, ಇದ್ದರೆ ಇಂತಹ ನಗೆಗಾರ ಇರಬೇಕು; ಇದ್ದರೆ ಇಂತಹ ಮಾನವೀಯ ಮನುಷ್ಯ ಇರಬೇಕು' ಎನಿಸಿದರು.

ಮರಣ ಶಯ್ಯೆಯಲ್ಲಿಯೂ 'ರಾ.ಶಿ.' ಯವರ ವಿನೋದ ಪ್ರವೃತ್ತಿ ಮಾಸಲಿಲ್ಲ. ಮಡಿಯುವುದಕ್ಕೆ ಎಂಟು-ಹತ್ತು ದಿನಗಳ ಮೊದಲು ನಾನು ಅವರನ್ನು ಕಡೆಯ ಸಲ ಕಂಡದ್ದು. ಹಾಸಿಗೆಯಲ್ಲಿದ್ದರು. ತುಂಬ ನಿಶ್ಶಕ್ತಿ. ತುಂಬ ಸಂಕಟ, ಆದರು ಮಾತಿಗೆ ಬರಗಾಲವಿಲ್ಲ. ಹಾಸಿಗೆ ಬಳಿಗೆ ಸರಿದು ಅವರನ್ನು ನೋಡುತ್ತಾ ನಿಂದೆ. ಸಾವಕಾಶವಾಗಿ ಕೈ ನೀಡಿದರು. ಮೃದುವಾಗಿ ಹಿಡಿದೆ, ಕಣ್ಣಿನಲ್ಲಿ ಒಳನೋವಿನ ಸಿಡಿತವಿದ್ದರೂ ಅವರ ಮುಖದಲ್ಲಿ ಮಂದಹಾಸ. ನಿಮಿಷ ತಡೆದು ''ಹೇಗಿದ್ದೀರಿ ಸರ್'' ಎಂದು ಕೇಳಿದೆ. ಮುಗುಳುನಗೆಯನ್ನರಳಿಸಿ ಬಿರುಕು ಧ್ವನಿಯಲ್ಲಿ ರಾ.ಶಿ.ಯವರು ಹೇಳಿದರು-

''ಅಯ್ಯಾ ರಂಗನಾಥ್, ಇನ್ನು ನೀನು ಕೇಳಬೇಕಾದ ಪ್ರಶ್ನೆ 'ಹೇಗಿದ್ದೀರಿ' ಅಲ್ಲಪ್ಪಾ 'ಏಕಿದ್ದೀರಿ' ಅಂತ''!!

## ಥಳುಕು - ತುಣುಕು

ರಾಯರು - ಪಂಡಿತರೇ! ತಲೆಯೆಲ್ಲಾ ಸಿಡೀತಾ ಇದೆ ರಾತ್ರಿಯೆಲ್ಲಾ ನಿದ್ರೆಯೇ ಇಲ್ಲ. ಪ್ರಾಣ ಹೋದರೆ ಬದುಕಿದೆ ಅನ್ನಿಸಿತು, ಅದಕ್ಕೆ ಹೇಳಿ ಕಳಿಸಿದೆ.

ಪಂಡಿತರು - ಒಳ್ಳೇ ಕೆಲಸ ಮಾಡಿದಿರಿ.

# ಒಂದ್ನಿಮಿಷ ನಕ್ಕು....

- ಕೆ. ಚಂದ್ರಮೌಳಿ

'ಒಂದ್ನಿಮಿಷ ನಕ್ಕು ಮುಂದೆ ಹೋಗಿ' ಅನ್ನೋದು "Stop & Proceed' ಅಥವಾ 'ನಿಂತು, ನೋಡಿ, ಮುಂದೆ ಹೋಗಿ' ಅನ್ನೋ ರೀತಿ ಇದೆ. ಕಣ್ಣು ಮುಚ್ಚಿಕೊಂಡು ಓಡ್ತಾ ಇದ್ದರೆ ಆಗೋದು ಅಪಘಾತ. ಅದೇ ರೀತಿ ಮುಖ ಸಿಂಡರಿಸಿಕೊಂಡು ಕಿರುಚ್ತಾನೋ, ತುಟಿ ಕಚ್ಕೊಂಡು ಕೆಲಸ ಮಾಡ್ತಾನೇ ಇದ್ರೂ, ಆಗೋದು ಅಪಘಾತವೇ. ಇಲ್ಲಿ ಮನಸ್ಸು ಚುಚ್ಚುತ್ತೆ, ಹೃದಯ ಕೊರೆಯುತ್ತೆ, ಯಾವ್ದೋ ಮೂಲೇಲಿ ಏನೋ ಒಂದು ತರಾ ನೋವು ಹುಟ್ಟುತ್ತೆ. ನೆನಪಿನ ಅಂಗಳದಲ್ಲಿ ಒಂದು ಕರೀದೋ, ಕಹೀದೋ ಛಾಯೆ ಹರಡುತ್ತೆ. ದಿನ ದಿನವೂ ಹೀಗೇ ಆಗ್ತಾ ಇದ್ದರೆ, ಒಂದಿನ ನೆನಪಿನ ಅಂಗಳವೆಲ್ಲಾ ಕಹಿಯೋ ಕಹಿ, ಹೃದಯವೆಲ್ಲಾ ಕೊರೆದೂ ಕೊರೆದೂ ತೂತೋ ತೂತು! ಅಂದ್ರೆ ಮುಖ ಸಿಂಡರಿಸಿಕೊಂಡೇ ಇರೋದು ಒಂದು ರೀತಿಯ ವಿಷದ ಗಾಳಿ. ಇದ್ದ ಹಾಗೆ - ನಿಮ್ಗೂ ಕಷ್ಟ, ಎದುರಿಗಿದ್ದವರಿಗೂ ಒಳ್ಳೇದಲ್ಲ. ಹೀಗಾಗ ಬಾರ್ದೂಂತ ಇದ್ರೆ, ಅಪಘಾತ ತಪ್ಪಿಸಬೇಕೂಂತ ಇದ್ರೆ, ಕಣ್ಣು ಬಿಚ್ಚಿ ಸುತ್ತಮುತ್ತ ನೋಡುವ ತರಹ ಮನ ಬಿಚ್ಚಿ ಸತ್ವ ತತ್ವ ನೋಡಬೇಕು. ಮನಸ್ಸಿನ ಬಾಗಿಲು ನಿಮ್ಮ ತುಟಿ ಅಲ್ವೇ? ಆದ್ದರಿಂದ ಮನ ಬಿಚ್ಚಿ ಅಂದರೆ ತುಟಿ ಬಿಚ್ಚಿ. ಎಲ್ಲೀ ಈಗ ನಿಮ್ಮ ತುಟಿ ಬಿರೀಲಿ, ಎಲ್ಲಿ ಒಂದ್ನಿಮಿಷ ನಗಿ, ನಕ್ಕು ಮುಂದೆ ಹೋಗಿ!

ನಕ್ಕು ಮುಂದೆ ಹೋಗಿ ಅನ್ನೋದು ಚೆನ್ನದಂಥಾ ಮಾತು, ಒಳ್ಳೇ ಮಹಾಮಂತ್ರ ಅನ್ನಿಸಿತು. ಇದನ್ನು ಮೊದಲಾಗಿ ಎಲ್ಲಾ ಕನ್ನಡಿಗರಿಗೂ ಹೇಳ್ಬೇಕು ಅನ್ನಿಸಿತು. ಅರೇ, ಬೇರೆಯವರಿಗೆ ಉಪದೇಶ ಮಾಡೋ ಮೊದಲು ನಾನೇ ಯಾಕೆ ಈ ಮಹಾಮಂತ್ರ ಜಪಿಸಿ ಅದರ ಪ್ರಭಾವ ನೋಡಬಾರ್ದೂಂತ ಅನ್ನಿಸಿತು. ಸರಿ, ಮಹಾಮಂತ್ರ ಜಪಿಸಲು ಶುರು ಮಾಡಿದೆ. ಪ್ರಭಾವ ಏನಾಯ್ತು ಅನ್ನೋದನ್ನ ನೀವೇ ನೋಡಿ.



ಬೆಳಗಾಗೆದ್ದು ಹಾಲಿನವನನ್ನು ನೋಡಿ ನಕ್ಕೆ. ''ಇವತ್ತು ಹಾಲು ನೋಡಿ ಸಾಬ್. ಒಂದು ಚೂರು ನೀರಿಲ್ಲ'' ಅಂತ ನಗುತ್ತಾ ಹೋದ.

ಅಂದ್ರೆ ನಾನು ನಗೋದು ಶುರುಮಾಡೋಕ್ಕೆ ಮೊದ್ಲು, ಇಷ್ಟು ದಿನವೂ ಹಾಲಿನಲ್ಲಿ ನೀರು ಇತ್ತೂಂತ ಅರ್ಥವಾಯಿತು. ಅವತ್ತು ಹೆಂಡತೀಯ ಗಲಾಟೆಯೋ ಗಲಾಟೆ ''ನೀವು ಎಲ್ರಿಗೂ ಸದರ ಕೊಟ್ಟು ಕೆಡಿಸಿ ಬಿಡ್ತೀರಾ! ಈ ಹಾಲು ನೋಡಿ, ಚೊಳ್ಳಟ್ಟೆ ನೀರು'' ಎಂದು ರೇಗಿದಳು. ಅವಳು ರೇಗಿದರೂ ನಾನು ಮಾತ್ರ ನಕ್ಕೆ. 'ನಿಮ್ಗೆ ಏನು ಹೇಳಿದರೂ ಪ್ರಯೋಜನವಿಲ್ಲ, ಸುಮ್ನೆ ನಗ್ತೀರಾ!' ಅಂತ ಆಕಡೆ ಹೋದಳು.




ಆ ನಂತರ ಕೆಲಸದಾಕಿಗೂ ನಾನೇ ಬಾಗಿಲು ತೆಗೆಯಬೇಕಾಯ್ತು. ಈ ಮುಂಬಾಯಿನ ಕೆಲಸದಾಕಿ ಯಾವಾಗ್ಲೂ ನನ್ನ ನೋಡಿ ನಗ್ತಾಳೆ. ಇವಳು ಯಾಕೆ ಹೀಗೆ ನಗ್ತಾಳೆ, ನನ್ನ ಮುಖದಲ್ಲಿ ಕೋತಿ ಕುಣಿಯುತ್ತಾ ಅಂತ ನನಗೆ ರೇಗುತ್ತೆ, ನನ್ನ ಮುಖ ಇನ್ನೂ ಗಂಟಾಗುತ್ತೆ. ಆದರೆ ಇವತ್ತು ಅವಳನ್ನು ಕಂಡು ನಾನೇ ಮೊದಲು ನಕ್ಕಾಗ ಅವಳಿಗೆ ಆಶ್ಚರ್ಯವಾಯಿತೋ, ಇನ್ನೇನನಿಸಿತೋ ಗೊತ್ತಿಲ್ಲ. ಪ್ರಾಯಶಃ ನನ್ನ ನಗು ನೋಡಿ ಅವಳಿಗೆ ಶಾಕ್ ಆಗಿರಬೇಕು. ಸ್ವಿಚ್ ಹಾಕಿದರೆ ಫ್ಯಾನ್ ತಿರುಗೋ ರೀತಿ, ನನ್ನ ನಗು ನೋಡಿ ಅವಳ ಸೆರಗು ಜಾರಿತು. ಅವಳು ಪಿಸು ಮಾತಲ್ಲಿ ''ಸಾಬ್, ಇವತ್ತು ಮೇಮ್ ಸಾಬ್ ಮನೇಲಿಲ್ಲವಾ?'' ಎಂದಳು. ಈಗ ಶಾಕ್ ಹೊಡೆದಿದ್ದು ನನಗೆ... ನನ್ನ ಮುಖದ ನಗು ತಕ್ಷಣ ಕುಗ್ಗಿ ಮೊಗ್ಗಾಗಿ ಬಿಟ್ಟಿತು. ಅಷ್ಟೇ ಆಗಿದ್ದರೆ ಪರವಾಗಿರಲಿಲ್ಲ. ಅವಳು ವಾಪಸ್ಸು ಹೋಗುವ ಮೊದಲು ಅದೇ ಪಿಸುಮಾತಲ್ಲಿ ''ಮುಂದಿನ ವಾರ ಮೇಮ್ ಸಾಬ್ ಊರಿಗೆ ಹೋಗ್ತಾರಲ್ವಾ?'' ಎಂದು ತುಂಟ ನಗೆ ನಗುತ್ತಾ ಚಲ್ಲು ಬಡಿದಾಗಲಂತೂ ನನ್ನ ಎದೆ ಝುಗ್ಗೆಂದಿತು. ಓಹೋ ಮಿಂಚನ ಭಟ್ಟನ ಪ್ರಾಣಕೆ ಬಂತು ಅನ್ನಿಸಿತು. ಇನ್ನು ಇಲ್ಲಿ ಒಬ್ಬನೇ ಇರೋದು ಕ್ಷೇಮವಲ್ಲ ಅನ್ನಿಸಿ, ಹೇಗಾದ್ರೂ ಮಾಡಿ ರಜ ತಗೊಂಡು ಹೆಂಡ್ತೀ ಜೊತೆ ನಾನು ಹೊರಟೇ ಬಿಡಬೇಕು ಅಂತ ತೀರ್ಮಾನ ಮಾಡಿಬಿಟ್ಟೆ.

ಅಂದು ಆಫಿಸಿಗೆ ಹೋದ ತಕ್ಷಣ, ಗುಂಗೆ ಗೋಳಯ್ಯನ ಮುಖವೇ ಮೊದಲು ಕಾಣಬೇಕೆ! ಅವನ ಮುಖ ಗೋಳು ಕರೆಯಾದರೆ ನನಗೇನೀಗ ಅಂತ, ಒಂದ್ನಿಮಿಷ ನಕ್ಕು ಮುಂದೆ ಹೊರಟೆ. ಆದ್ರೆ ಆ ಗುಂಗೆ ನನ್ನನ್ನು ಅಷ್ಟಕ್ಕೇ ಬಿಡಬೇಕಲ್ಲ. ಬೇತಾಳನ ತರಹ ಬೆನ್ನು ಹತ್ತೇಬಿಡ್ತು. ''ನೋಡಿ, ನೀವೊಬ್ರೇ

ನನ್ನನ್ನು ಚೆನ್ನಾಗಿ ಅರ್ಥ ಮಾಡ್ಕೊಳ್ಳೋರು! ನನ್ನ ಕಷ್ಟದುಃಖ ಹೇಳ್ಕೊಳ್ಳೇಕೆ ಯಾರೂ ಸಿಗುಲ್ಲ....'' ಅಂತ ಶುರು ಮಾಡೇಬಿಡ್ತು. ಈ ಗೋಳಯ್ಯ ಯಾವತ್ತಾದ್ರೂ ತನ್ನ ಸುಖ-ಸಂತೋಷ ಹೇಳ್ಕೊಂಡಿದ್ರೆ, ಅವನ ಕಷ್ಟ-ದುಃಖ ಯಾರಾದ್ರೂ ಕೇಳ್ತಾರೆ. ಇದನ್ನು ಹೇಳಲಾಗದೆ ಇನ್ನೊಂದು ನಗು ಕೊಟ್ಟೆ. ಸರಿ ಬಿಡಿ, ಮುಗ್ದೇ ಹೋಯ್ತು. ಹೆಂಡ್ತಿ ಜೊತೆ ಹೊಸ ಸೀರೆಗಾದ ಜಗಳ, ಮಕ್ಕಳ ನೆಗಡಿ ಕೆಮ್ಮಿನಿಂದ ಹಿಡಿದು ಬಾಸ್ ಹಾಕಿದ ಛೀಮಾರಿಯ ವರೆಗೆ ಎಲ್ಲವನ್ನೂ ರಾಗ ರಾಗವಾಗಿ, ಗುಂಗೀ ತರಹ ನನ್ನನ್ನು ಕೊರೆದು ಹಾಕಿಬಿಟ್ಟ!

''ಸಾಹೇಬ್ರು ಕರೀತಾರೆ'' ಅಂತ ಕೇಳಿದಾಗ, ಬದುಕಿದೆಯಾ ಬಡ ಜೀವವೇ ಅಂತ ಗುಂಗೆಯಿಂದ ಬಿಡಿಸಿಕೊಂಡೆ. ಅಷ್ಟೊತ್ತಿಗೆ ಬೆಳಗ್ಗಿನ ಕಿಸಬಾಯಿ ನಗು ಆಗಲೇ ಸಾಕಷ್ಟು ಸೊರಗಿತ್ತು. ಸಾಹೇಬ್ರನ್ನ ನೋಡಿದಾಗ ಹೊರಬಂದದ್ದು ಒಂದು ನಿಸ್ಸಾರವಾದ ನಗು - ರೇಲ್ವೇ ಸ್ಟೇಷನ್‌ನ ಚಾ ಇದ್ದಾಂಗಿರಬೇಕು! ಸಾಹೇಬ್ರು ಗುಡುಗಿದರು ''ಏನು? ಬೆಳಗಾಗೆದ್ದು ನಿಮ್ಗೆ ಬೇರೆ ಕೆಲಸವೇ ಇಲ್ವಾ? ಆ ಗೋಳಯ್ಯನ ಜೊತೆ ಹರಟೆ ಕೊಚ್ತಾ ಕೂತು ಬಿಟ್ಟಿದ್ದೀರಲ್ಲಾ! ನಾನು ನೆನ್ನೆ ಕೇಳಿದ್ದ ರಿಪೋರ್ಟ್ ಏನಾಯ್ತು?'' ಯಾರಾದ್ರೂ ರಜ ಕೇಳಿದಾಗ ಬಾಸ್ ಯಾವ್ದೋ ಒಂದು ರಿಪೋರ್ಟ್ ಬಗ್ಗೆ ಕೇಳೇ ಕೇಳ್ತಾರೆ. ಆದ್ರೆ ನಾನು ರಜಾ ಕೇಳೋ ಮೊದ್ಲೇ ಅವರು ರಿಪೋರ್ಟ್ ಕೇಳಿದರೆ ರಜ ಕೇಳೋದಾದ್ರೂ ಹೇಗೆ ಅಂತ ತಬ್ಬಿಬ್ಬಾಬಯಿತು. ಏನಾದ್ರೂ ಆಗಲಿ, ಹೊಸ ಮಂತ್ರ ಉಪಯೋಗಿಸಿಬಿಡೋಣ ಅಂತ ಒಂದ್ನಿಮಿಷ ನಕ್ಕೆ. ''ರ್ರೀ. ಯಾಕ್ರೀ ಹಲ್ಲು ಕಿಸೀತಾ ನಿಂತೀರಿ? ಬೇಗ ರಿಪೋರ್ಟ್ ತಯಾರು ಮಾಡಿ, ಹೋಗಿ!'' ಎಂದು ಗುಡುಗಿದಾಗ ಮೋಡದ ಛಾಯೆ ನನ್ನ ತುಟೀ ಮೇಲೂ ಬಿತ್ತು!

ಏನಾದ್ರೂ ಕಷ್ಟ ಬರಲಿ, ಇವತ್ತು ನನ್ನ ಮಹಾಮಂತ್ರ ಮಾತ್ರ ಮರೀಬಾರ್ದೂಂತ, ನನ್ನ ಆಫೀಸಿಗೆ ಬಂದವನೇ ಎಲ್ಲರನ್ನೂ ನೋಡಿ ನಕ್ಕೆ. ಆಫೀಸಿನಲ್ಲಿದ್ದ ಡಿಪ್ಪು, ಡಿಮ್ಮು, ಮೀನಾ, ಟೀನಾ ಎಲ್ಲರಿಗೂ ಆಶ್ಚರ್ಯ ಆಗಿರಬೇಕು. ''ಏನ್ರೀ? ಏನ್ಸಮಾಚಾರ? ಭಾರೀ ನಗ್ತಾ ಇದ್ದೀರಲ್ಲ'' ಅಂದ ಡಿಮ್ಮು. ''ಏನೋ ವಿಶೇಷ ಇರ್ಬೇಕು, ನಮ್ಗೂ ಹೇಳಿ ಪರವಾಗಿಲ್ಲ'' ಅಂದ್ಳು ಮೀನಾ. ಏನಿಲ್ಲಾ ಅಂತ ಮತ್ತೆ ನಕ್ಕೆ. ''ರೀ, ವಿಶೇಷ, ಗಿಶೇಷ ಇಲ್ದೆ ನೀವು ಸುಮ್‌ಸುಮ್ನೆ ನಕ್ಕುಬಿಡ್ತೀರಾ? ಬಾಸ್ ಶಾಬಾಸ್ ಅಂದಿರಬೇಕು'' ಅಂದ ಡಿಪ್ಪು. ''ಅವ್ರು ಹಾಗೆಲ್ಲಾ ನಮ್ಮ ಮೇಲೆ ನಗು ಖರ್ಚು ಮಾಡೋಲ್ಲಾ. ಆ ನಗು ಎಲ್ಲಾ ಆ ಟೀನಾಗೆ ಮೀಸಲು...'' ಎಂದು ಡಿಮ್ಮು ಕಳ್ಳ ನಗೆ ನಕ್ಕ. ''ಪ್ರೊಮೋಷನ್ ಬಗ್ಗೆ ಮಾತಾಡಿರ್ಬೇಕು.... ಹೇಳ್ರೀ'' ಅಂದಳು ಟೀನಾ. ''ಹಾಗೇ ಅಂದ್ಕೊಳ್ಳಿ'' ಅಂತ ಟೀನನ್ನು ನೋಡಿ ಈ ಸಲ ನಿಜವಾಗ್ಲೂ ನಕ್ಕೆ. ಅಷ್ಟು ಹೇಳಿದ್ದೇ ತಡ, 'ಹೋಯ್' ಅಂತ ಕೂಗಿಕೊಂಡು ಎಲ್ಲರೂ ನನ್ನನ್ನು ಮುತ್ತಿಕೊಂಡರು. ಸರಿ, ಅವತ್ತು

ಊಟದ ನಂತರ ಎಲ್ಲರಿಗೂ ಐಸ್‌ಕ್ರೀಂ ಅಂತ ನನ್ನ ತಲೆಗೇ ದಂಡ ಕಟ್ಟಿದರು. ಅಷ್ಟೇ ಆಗಿದ್ದರೆ ಪರವಾಗಿರಲಿಲ್ಲ. ಅವತ್ತು ಅದೇನೋ ಲಾಟರಿಯ ಆಟವಂತೆ. ಅದನ್ನು ಆಡಿ ಚೀಟಿ ತೆಗೆದಳು ಟೀನಾ! ಚೀಟಿಯಲ್ಲಿ ಬರೆದದ್ದನ್ನು ಟೀನಾನೇ ಓದಿದಳು ''ಇವತ್ತು international uncle's day. ಇವತ್ತಿನ ಸಮಾರಂಭಕ್ಕೆ ನಮ್ಮ ಇವರೇ ಅಂಕಲ್ ಆಗಿ ಆಯ್ಕೆ ಆಗಿದ್ದಾರೆ'' ಅಂದಾಗ ಎಲ್ಲರೂ ಹೋಯ್ ಹೋಯ್ ಅಂತ ಕೂಗಿದರು.

ಅಂಕಲ್, ಅಂಕಲ್ ಗ್ರೇಟ್ ಅಂಕಲ್ ಅನ್ನೋ ಜೊತೆ ಬಾಲ್ಡೀ ಅಂಕಲ್ ಅಂತಾನೂ ಯಾರೋ ಕೂಗಿದರು. ಟೀನಾನೇ ಸೇರಿದ್ದಳೂಂತ ನನ್ನ ಅನಿಸಿಕೆ. ನನಗೆ ಅದೇ ದುಃಖ! ಟೀನನ್ನ ನೋಡಿ, ನನ್ನ ವಯಸ್ಸನ್ನು ಅರ್ಥ ಮಾಡಿಕೊಂಡು, ನಾನು ಟೀನಂಗೆ ಲೈನ್ ಹೊಡ್ದು, ಕಣ್ ಹೊಡೀತಾ ಇದ್ರೆ... ಈ ಟೀನಾ, ನನ್ನನ್ನೇ ಹೀಗೆ ಬಾಲ್ಡೀ ಅಂಕಲ್ ಅನ್ನೋದೇ. ಅಯ್ಯೋ ದೇವ್ರೆ ರಸಿಕರಿಗೂ ಕಲಿಕಾಲ ಬಂದ್ಹೋಯ್ತು! ಹಾಯ್ ರಾಮ್ ಹಾಯ್ ರಾಮ್!!




ಅವತ್ತು ಸಂಜೆ ಮನೆಗೆ ಹೊರಟಾಗ ತಡವಾಗಿತ್ತು. ಬಸ್ಸಿಗೆ ಕಾಯುತ್ತಾ ನಿಂತಾಗ ಅಲ್ಲಿ ಹೆಚ್ಚು ಜನ ಇರಲಿಲ್ಲ. ಯಾವನೋ ಬಂದು ಪಕ್ಕದಲ್ಲಿ ನಿಂತ, ದುರುಗುಟ್ಟಿಕೊಂಡು ನನ್ನನ್ನೇ ನೋಡಿದ. ನಾನು ಒಂದ್ನಿಮಿಷ ನಕ್ಕೆ. ''ಚಾಚಾ'' ಅಂದ. ಅರೇ ಇವ್ನ. ನಾನು International ಅಂಕಲ್ ಅಂತ ಆಯ್ಕೆ ಆಗಿದ್ದು ಆಫೀಸಿನಲ್ಲಿ. ಇದು ಇವನಿಗೆ ಹೇಗೆ ಗೊತ್ತಾಯ್ತು ಅಂತ ಆಶ್ಚರ್ಯ ಆಯ್ತು, ಸಿಟ್ಟೂ ಬಂತು. ಆದ್ರೂ ಅದನ್ನು ತೋರಿಸದೆ ''ಕಾಕಾ'' ಅಂದೆ, ಮತ್ತೆ ನಕ್ಕೆ. ''ಸಾಂತಾಕ್ರುಜ್?'' ಅಂದ. ''ಸಂತ್ರಾ ಜ್ಯೂಸ್'' ಅಂದೆ. ನಾನು ಹಾಗೆ ಹೇಳಿದ್ದೇ ಕ್ಷಣ ಆತ ತನ್ನ ಚೀಲ ತೆಗೆದು ಏನೋ ನನ್ನ ಕೈಗೆ ಕೊಡಲು ಬಂದ... ಆದರೆ ಅಷ್ಟೊತ್ತಿಗೆ ಸರಿಯಾಗಿ ಇನ್ನೊಬ್ಬ ಸುಮಾರು ನನ್ನಷ್ಟು ಎತ್ತರ, ನನ್ನ ತರವೇ ನೀಲಿ ಪ್ಯಾಂಟು, ಬಿಳೀ ಷರಟು, ಹಾಕ್ಕೊಂಡು ಅಲ್ಲಿಗೆ ಬಂದ. ''ಕಾಕಾ'' ಅಂದ. ಇವನು ''ಚಾಚಾ'' ಅಂದ. ಹೀಗೇ ಅದೇನೇನೋ ಸಂಜ್ಞೆಗಳಲ್ಲೇ ಮಾತಾಡಿದರು. ಕೊನೆಗೆ ಇಬ್ಬರೂ ನನ್ನನ್ನು ದುರುಗುಟ್ಟಿ ನೋಡ್ಕೊಂಡು ಹೊರಟರು. ಅದೇನೋ ಪ್ಯಾಕೆಟ್ ಒಬ್ಬನಿಂದ ಇನ್ನೊಬ್ಬನಿಗೆ ಹೋಯಿತು. ಆ ಪ್ಯಾಕೆಟ್ ನನಗೇ ಬಂದಿರುತಿತ್ತು. ಏನಿತ್ತೋ ಏನೋ - ಚಿನ್ನವೋ, ಡ್ರಗ್ಗೋ ಸ್ಮಗ್ಲಿಂಗ್‌ದು ಏನೋ ಬಚಾವಾದೆ ಅನಿಸಿತು. ಈಗ ಒಳಗೊಳಗೆ ನಿಜವಾಗ್ಲೂ ನಗು ಬಂತು. ಒಂದ್ನಿಮಿಷ ನಕ್ಕು ಮುಂದೆ ಹೋದೆ!!

# ಕೊರವಂಜಿ, ರಾ.ಶಿ.

**– ಟಿ. ಸುನಂದಮ್ಮ**

ವಿದ್ಯಾರ್ಥಿಗಳಿಗೆ ಅನೇಕ ತರಹದ ಆಶೆಗಳಿರುವುದು ಸ್ವಾಭಾವಿಕ. ಆದರೆ ಕಾಲೇಜು ವಿದ್ಯಾರ್ಥಿ ಶಿವರಾಂನದು ಅಪರೂಪದ ಆಶೆ - ಆಂಗ್ಲ 'ಪಂಚ್' ಪತ್ರಿಕೆಯ ಸಂಚಿಕೆಗಳ ಒಡೆಯನಾಗುವುದು. ಹರಾಜಾದ ಐವತ್ತು ಸಂಚಿಕೆಗಳಿಗೆ ನಾಲ್ಕು ರೂಪಾಯಿ ಕೊಡಲಾಗದೆ ಕೊರಗಿದಾಗ, ಕಾಲೇಜು ಪ್ರಿನ್ಸಿಪಾಲರು ಅವನ್ನು ಶಿವರಾಂಗೆ ಉಡುಗೊರೆಯಾಗಿ ಕೊಟ್ಟರು. ಈತನಿಗೆ ಅದೊಂದು ನಿಧಿಯಾಯಿತು; ಆ ನಿಧಿಯನ್ನು ಮುಂದೆ ಅವರು ಕನ್ನಡಿಗರಿಗೆ ಹಂಚಿದರು.

ಚಿಕ್ಕ ವಯಸ್ಸಿನಿಂದ ಹಾಸ್ಯಪ್ರಿಯರಾದ ಶಿವರಾಂ ರವರ ಕನಸು, ಕನ್ನಡದಲ್ಲಿ 'ಪಂಚ್' ಮಾದರಿಯ ಹಾಸ್ಯ ಮಾಸಪತ್ರಿಕೆಯನ್ನು ಹೊರತರಬೇಕೆಂಬುದು. ಅವರ ಕನಸು ನನಸಾಗಲು ವರ್ಷಗಳೇ ಬೇಕಾದುವು. ವಿದ್ಯಾಭ್ಯಾಸ ಮುಂದುವರೆಸಿ ವೈದ್ಯರಾಗಿ ತಮ್ಮ ಕಾಲಮೇಲೆ ತಾವು ನಿಂತಾಗ, ಶಿವರಾಂ ರವರ ಮಾನಸ ಪುತ್ರಿ ''ಕೊರವಂಜಿ'' ಹುಟ್ಟಿದಳು. ಒಂದಿಗೇ ಡಾಕ್ಟರ್ ಶಿವರಾಂ ಸಾಹಿತಿ 'ರಾ.ಶಿ' ಯಾದರು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹಾಸ್ಯಕ್ಕೆ ಗಣ್ಯಸ್ಥಾನವಿರಲಿಲ್ಲ. ಸಾಹಿತ್ಯವಂತೂ ಇಲ್ಲವೇ ಇಲ್ಲ. ತೀರ ಹಗುರ ಹಾಸ್ಯದ ರಾ. ನರಸಿಂಹಾಚಾರ್ಯರ 'ನಗೆಗಡಲು' ಅಂದಿನ ಏಕೈಕ ವಿನೋದಕೃತಿಯೇನೋ?

ಹಾಸ್ಯವನ್ನು ಪ್ರತಿಷ್ಠಿತ ಪೀಠದಲ್ಲಿ ನಿಲ್ಲಿಸಿದವರು ಟಿ.ಪಿ. ಕೈಲಾಸಂ. ಕೈಲಾಸಂ ಮತ್ತು ಶಿವರಾಂ ಆತ್ಮೀಯರು. ಹಿರಿಯ-ಕಿರಿಯರದು ಗುರು-ಶಿಷ್ಯ ಸಂಬಂಧ; ಶಿವರಾಂ ರವರ ಹಾಸ್ಯ ವಿನೋದಾಭಿಮಾನಕ್ಕೆ ಈ ಸ್ನೇಹ ಸಾಕಷ್ಟು ಪ್ರಭಾವ ಬೀರಿತು. ಇನ್ನೊಂದು ಸ್ವಾರಸ್ಯವಾದ ಅಂಶವೆಂದರೆ, ಉದ್ಯೋಗ ಅರಸಿ ಸಿನಿಮಾರಂಗ ಪ್ರವೇಶಿಸಲಿದ್ದ ಶಿವರಾಂ ರವರನ್ನು ಅನಿರೀಕ್ಷಿತವಾಗಿ ಅಲ್ಲಿಗೆ ಬಂದ ಕೈಲಾಸಂರವರು ಆಗ್ರಹದಿಂದ ತಡೆಯದಿದ್ದರೆ, ಕನ್ನಡಿಗರಿಗೆ ಆಗುತ್ತಿತ್ತು, ಅಪಾರ ನಷ್ಟ!

೧೯೪೨ ರಲ್ಲಿ ಕಣಿ ಹೇಳಲು ಬಂದಳು ಕೊರವಂಜಿ. ಮುಖಪುಟವೇ ಆಕರ್ಷಕ. ಬಾಲೆ ಕೊರವಿಯನ್ನು ಎತ್ತಿ ಹಿಡಿದ ಕೊರವಂಜಿ; ತುಂಬು ನೆರಿಯ ಲಂಗ ಮೇಲ್ಹೊದಿಕೆ, ಮಣಿಗುಂಡು ಮಾಲೆ, ಕಟ್ಟಿದ ಮುಡಿಗೆ ಸಿಕ್ಕಿಸಿದ ತೆನೆಹೂವು.

ವಿಶೇಷವೆಂದರೆ, ಕಣಿ ಹೇಳುವವರ (ಲೇಖಕರ) ಹೆಸರುಗಳ ಪಟ್ಟಿಯೂ ಮುಖಪುಟದಲ್ಲಿ ಮುದ್ರಿತ.

ಮೊದಲು, ಬರೆದವರ ಸಂಖ್ಯೆ ಕಡಿಮೆ; ಹೊಸ ಕ್ಷೇತ್ರ ಪ್ರವೇಶಿಸುವ ಹಿಂಜರಿಕೆ. ಹೆಸರಾಂತ ಸಾಹಿತಿಗಳಾದ ಜಿ.ಪಿ. ರಾಜರತ್ನಂ, ನಾ. ಕಸ್ತೂರಿ, ಶ್ರೀರಂಗ ಇವರುಗಳ ಲೇಖನಗಳಿಂದ ಪ್ರಾರಂಭ, ರಾ.ಶಿ. ಯವರೂ ಬರೆದರೆಂದು ಹೇಳಬೇಕಾದ್ದೇ ಇಲ್ಲ. ಲೇಖನಗಳ ಕೊರತೆಯಾದಾಗ ಬಚ್ಚ, ಪ್ರಸಾದ್, ಕುಮಾರ್, ಎಂದು ಬೇರೆ ಬೇರೆ ಹೆಸರುಗಳಲ್ಲಿ ಬರೆದುಬಿಡುತ್ತಿದ್ದರು. ಕ್ರಮೇಣ ಕೊರವಂಜಿ ಬಳಗ ಹೆಚ್ಚಾಯಿತು. ಕೆಲವರು ಅಡ್ಡ ಹೆಸರಿನ ನಾಮಕರಣ ಮಾಡಿಕೊಂಡರು - ಬುಳ್ಳ, ಅಷ್ಟಾವಕ್ರ, ಕೇಫ... ಹೀಗೆ ಹೆಸರಿನ ಹ್ರಸ್ವರೂಪ ಮತ್ತೆ ಕೆಲವರದು - ಟಿ. ಎಸ್ಸಾರ್, ಅ.ರಾ.ಸೇ, ರಾಮಿ, ಹಾ.ರಾ...! ಓದುಗರಿಗೆ, ಅಪಹಾಸ್ಯವಲ್ಲದ, ಅರಿವು ನಲಿವು ಕೂಡಿದ ನಗೆಯ ಲಘು ನೀತಿಯ ಬಿಗು ಬೆರೆತ ಶುದ್ಧ ಹಾಸ್ಯವನ್ನು ಕೊರವಂಜಿ ತೋರಿಸಿತು. ಈ ಕಣಿಗಾರ್ತಿ ರೂಪಿಸಿದ ಹಾಸ್ಯಸಾಹಿತಿಗಳಲ್ಲಿ ಅ.ರಾ.ಸೇ. ದಾಶರಥಿ ದೀಕ್ಷಿತ್, ಕೇಫ, ರಾಮ್ಸಾಮಿ, ಇಂಥವರಲ್ಲದೆ ಒಬ್ಬಳು ಮಹಿಳೆಯೂ ಸೇರಿದಳು; ಅವಳು ಟಿ. ಸುನಂದಮ್ಮ.

ಹಾಸ್ಯ ಪ್ರಸಂಗಗಳ ನೇರ ನಿರೂಪಣೆಯಿಂದ ಪ್ರಾರಂಭವಾಗಿ, ಹೊಸ ಪ್ರಾಕಾರಗಳು ಹುಟ್ಟಿಕೊಂಡುವು. ಅಣಕುವಾಡು, ಹಾಸ್ಯ ಕವನ, ವ್ಯಂಗ್ಯ ವಚನ, 'ಲಿಮರಿಕ್ಸ್', 'ಪ್ಯಾರೊಡಿ' ಇವು ಕನ್ನಡದಲ್ಲಿ ಅಪರೂಪ ಶಾಖೆಗಳು. ರಾ.ಶಿ.ಯವರ ಕುಹಕಿಡಿಗಳು, ಉರಿಗಾಳು, ಅಣಕುಗಾದೆ ಇವಂತೂ ಚುರುಕು ಮುಟ್ಟಿಸಿ ಚಕ್ಕಳಗುಳಿ ಇಟ್ಟ ಅಸ್ತ್ರಗಳು. ಇಂದು ಜನಪ್ರಿಯವಾಗಿ ಪ್ರಚಾರದಲ್ಲಿರುವ 'ಚುಟುಕ ಸಾಹಿತ್ಯ' ಮುವ್ವತ್ತು ವರ್ಷಗಳ ಹಿಂದೆಯೇ ಕೊರವಂಜಿಯಲ್ಲಿ ಮಿಂಚಿತ್ತು.

ಕೆಲವು ಅನಿವಾರ್ಯ ಕಾರಣಗಳಿಂದಾಗಿ ಹೊರತು, ನಾನು ಪ್ರತಿ ತಿಂಗಳೂ ಬರೆದೆ. ಪ್ರಚಲಿತ ಸಾಮಾಜಿಕ, ರಾಜಕೀಯ, ಅಥವಾ ಕಾಲ್ಪನಿಕ ಆಧಾರ. ಚುನಾವಣೆ, ಸಂಪತ್ ತೆರಿಗೆ, ಬಂಗಾರ ನಿಯಂತ್ರಣ, ಸಣ್ಣ ಉಳಿತಾಯ, ಮಿತ ಸಂತಾನ, ಮಹಿಳಾ ಸಮ್ಮೇಳನ, ಇಂತಹ ವಿವಿಧ ವಸ್ತುಗಳು. ಒಮ್ಮೊಮ್ಮೆ ಹಾಸ್ಯದಲ್ಲೇ ಹಾಸ್ಯ ಚಿಗುರಿದ್ದುಂಟು. 'ಹೆಸರಲ್ಲೇನಿದೆ?' ಎನ್ನುವ ನನ್ನ ಲೇಖನದಡಿ ನನ್ನ ಹೆಸರೇ ಬಿಟ್ಟುಹೋಗಿತ್ತು. ಅದನ್ನೇ ಆಧರಿಸಿ 'ತಿರುಗುಬಾಣ' ಬರೆದು ಕಳಿಸಿದೆ. ಆ ಲೇಖನದ ಕೆಳಗೆ ರಾ.ಶಿ.ಯವರ ಟಿಪ್ಪಣಿ ಹೀಗಿತ್ತು, 'ಲೇಖಕಿಯ ಹೆಸರು ಮುದ್ರಿಸದಿದ್ದುದು ಒಳ್ಳೆಯದಾಯಿತು; ಇನ್ನೊಂದು ಒಳ್ಳೇ

ಲೇಖನ ಬಂತು! 'ಕೈಹಿಡಿದಾಕೆ ಕಿಡಿಕಿಡಿಯಾಗೋದ್ಯಾಕೆ?' ಹಾಸ್ಯ ಕವಿತೆ ಪ್ರಕಟವಾದ ಮರು ಸಂಚಿಕೆಯಲ್ಲಿ 'ಕೈಹಿಡಿದಾತ ಕಿಡಿಕಿಡಿಯಾಗೋದ್ಯಾಕೆ?' ನಾನು ಪ್ರತಿಕ್ರಿಯಿಸಿದ ಕವನ!

ಲೇಖಕರು ತಮ್ಮ ಊಹಾಲೋಕದ ಪಾತ್ರಗಳನ್ನು ಸೃಷ್ಟಿಸಿಕೊಂಡು ಅವರ ಸುತ್ತ ಬರಹದ ಕಟ್ಟಡ ಎಬ್ಬಿಸುತ್ತಿದ್ದುದು ವೈಶಿಷ್ಟ್ಯ. 'ಸರಸು-ಮೈಲಾರಯ್ಯ' ನನ್ನ ಕಲ್ಪನಾ ದಂಪತಿಗಳಾದರೆ, ದಾಶರಥಿ ದೀಕ್ಷಿತರ ಪಕೋಡಪ್ರಿಯ 'ದಫೇದಾರ್ ದೇರಣ್ಣ-ಸಾವಂತ್ರಮ್ಮ' ಇನ್ನೊಂದು ಜೋಡಿ. 'ಪಿ.ಜಿ. ವೋಡ್ ಹೌಸ್'ನ ಬರಹಗಳನ್ನು ಕನ್ನಡಕ್ಕೆ ಅಳವಡಿಸಿಕೊಂಡ 'ಕೇಫ'ರ 'ಶೌರಿ', ರಾ.ಶಿ.ಯವರ 'ಬುದ್ಧೋಜಿ, ಅವರಮೊದ್ದು, ಘಟು, ಮಿಟಕಲಾಡಿ ಮೀನಾಕ್ಷಿ' ಮೊದಲಾದವರೆಲ್ಲ ಅಂದಿನ ಓದುಗರಲ್ಲಿ ಮನೆಮಾತಾದರು!

ಕಾಲು ಶತಮಾನ ಕನ್ನಡಿಗರ ಅಚ್ಚು ಮೆಚ್ಚಾಗಿದ್ದ ಕೊರವಂಜಿ ಕಾಡಿಗೆ ಹೊರಟು ಹೋದಳು. ಜಾಹೀರಾತುಗಳ ಕೊರತೆ, ಸಂಪಾದಕರ ಸ್ವಾಭಿಮಾನ; 'ನಷ್ಟಿಪ' ಎಂದು ತಮ್ಮನ್ನು ತಾವೇ ಹೇಳಿಕೊಂಡರು. ''ಅವಳಿಲ್ಲದಿದ್ದರೇನು, ಅವಳ ಸೆರಗು ಪ್ರತಿ ಪತ್ರಿಕೆಯಲ್ಲೂ ಸರಿಸಿದ ಸರಸರ ಕೇಳುತ್ತಿದೆಯಲ್ಲ?'' ಎಂದು ಸಮಾಧಾನ ಮಾಡಿಕೊಂಡರು.

ನಾನು 'ಕೊರವಂಜಿ ಸುನಂದಮ್ಮ'ನಾದ ಹತ್ತು ವರ್ಷಗಳ ನಂತರ ಸಂಪಾದಕರ ಭೇಟಿ ಮಾಡಿದ್ದು ಎಂದು ಹೇಳಿದರೆ ಇಂದಿನ ಪೀಳಿಗೆ 'ಕಿಸಿಕಿಸಿ'ಯಲ್ಲ, 'ಗಹಗಹಿಸಿ' ನಕ್ಕಾರು! ಆದರೆ ಅಂದಿನ ಪರಿಸರ ಹಾಗಿತ್ತು. ಹೆಣ್ಣುಮಕ್ಕಳು ಸ್ವತಂತ್ರವಾಗಿ ಹೊರಗೆ ಹೋಗುತ್ತಿರಲಿಲ್ಲ, ಸಾಹಿತ್ಯಿಕ ಕಾರ್ಯಕ್ರಮಗಳು ತೀರ ಅಪರೂಪ. ದೂರವಾಣಿ ಇಲ್ಲ, ಹತ್ತಿರವಾಣಿ ಎಂದರೆ ಅಂಚೆ ಮಾತ್ರ. ನನ್ನ ಲೇಖನದ ಅಂಚೆಪೆಟ್ಟಿಗೆ ಮುಟ್ಟುತ್ತಿದ್ದುದೂ ತಮ್ಮನ ಮೂಲಕ, ಅಥವಾ ನೆರೆಹೊರೆ ಹುಡುಗರ ನೆರವಿನಿಂದ! ಡಾ। ಶಿವರಾಂ ರವರ ಎರಡನೆಯ ಮಗಳು ಸೌ. ಕಮಲಳ ವಿವಾಹದ ಆಹ್ವಾನ ಪತ್ರಿಕೆ ಬಂದಾಗ, ಬಸವನಗುಡಿ ವಾಸಿಯಾಗಿದ್ದ ನಾನು ಯಾರದೋ ಜೊತೆ ಹಿಡಿದು ಮಲ್ಲೇಶ್ವರಕ್ಕೆ ಬಸ್ಸಿನಲ್ಲಿ ಅವರ ಮನೆಗೆ ಹೋದದ್ದೇ ಸಾಹಸ; ಹಿರಿಯ ಮಗಳು ಸೌ. ವಿಮಲಾಗೆ ನಾನೇ ಪರಿಚಯಿಸಿಕೊಂಡಾಗ, ಆಕೆ ಉದ್ವೇಗ, ಸಂತೋಷದಿಂದ ತಂದೆಯ ಬಳಿ ಕರೆದುಕೊಂಡು ಹೋದಳು. ಅವರ ಆನಂದ, ನನ್ನ ಬಗ್ಗೆ ಹೆಮ್ಮೆ ಎಷ್ಟಿತ್ತೆಂದರೆ ಅಲ್ಲಿದ್ದ ದೊಡ್ಡ ಸಂಖ್ಯೆಯ ಆಹ್ವಾನಿತರೆಲ್ಲರಿಗೆ (ಬಹುತೇಕ ವೈದ್ಯರು) 'ನಮ್ಮ ಸುನಂದಮ್ಮ' ಎಂದು ತೋರಿಸಿದ್ದಲ್ಲದೆ ತಮ್ಮ ಕಾರಿನಲ್ಲಿ ನನ್ನನ್ನು ಮನೆಗೆ ಕಳಿಸಿಕೊಟ್ಟರು.

ನಂತರದ ವರ್ಷಗಳಲ್ಲಿ ಸಾಹಿತ್ಯ ವಾತಾವರಣದಲ್ಲಿ ಬದಲಾವಣೆ ಆಯಿತು. ಕಾರ್ಯಕ್ರಮಗಳು, ಸಭೆ ಸಮ್ಮೇಳನಗಳು, ನಡೆದುವು; ಲೇಖಕಿಯರು ಅಲ್ಲಲ್ಲಿ ಸಂಘಟಿಸಿದರು, ಸಾಹಿತ್ತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅಂತಹ ಕೆಲವು ಸಂದರ್ಭಗಳಲ್ಲಿ ರಾ.ಶಿ. ಯವರೊಂದಿಗೆ ವೇದಿಕೆಯಲ್ಲಿದ್ದಾಗ, ಅವರಿಗೆ ನನ್ನ ಬಗ್ಗೆ ತುಂಬ ಅಭಿಮಾನ. ನನ್ನ ಯಾವುದಾದರೂ ಲೇಖನವನ್ನು ಉದಹರಿಸಿ ಸಭಿಕರನ್ನು ನಗಿಸುತ್ತಿದ್ದರು. ಕೆಲವು ಆತ್ಮೀಯ ಲೇಖಕಿ ಸೋದರಿಯರು ನನ್ನ ಅರವತ್ತನೇ ಹುಟ್ಟುಹಬ್ಬದ ಸತ್ಕಾರ ಕೂಟ ಏರ್ಪಡಿಸಿದ್ದರು; ರಾ.ಶಿ.ಯವರು ದಾಶರಥಿ ದೀಕ್ಷಿತ್‌ರು ಮುಖ್ಯ ಅತಿಥಿಗಳು. ರಾ.ಶಿ.ಯವರು ಅವರು ಆಂಗ್ಲ ಭಾಷೆಯಲ್ಲಿ ಬರೆದಿದ್ದ ದರ್ಶನ ಸಾಹಿತ್ಯದ 'ಆನಂದ' ಹೊತ್ತಗೆಯನ್ನು ಬೆಳ್ಳಿ ಕುಂಕುಮದ ಭರಣಿಯೊಂದಿಗೆ ಉಡುಗೊರೆಕೊಟ್ಟು, 'ಇನ್ನು ಹಾಸ್ಯ ಕಡಿಮೆ ಮಾಡು' ಅಧ್ಯಾತ್ಮದ ಕಡೆ ನೋಡು' ಎಂದು ಲಘು ಹಿತನುಡಿ ಹೇಳಿದರು.

ರಾ.ಶಿ. ಯವರು ಅಧಿಕಾರಪ್ರಿಯರಲ್ಲ. ಕರ್ನಾಟಕ ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿ ನೇಮಕಗೊಂಡಾಗ ಅಭಿನಂದಿಸಿ ಪತ್ರ ಬರೆದೆ. ಅವರ ಪ್ರತ್ಯುತ್ತರದಲ್ಲಿ ತೃಪ್ತಿಗಿಂತ ಅಸಮಾಧಾನದ ನೆರಳು ಹೆಚ್ಚಾಗಿತ್ತು. ಅಂತೆಯೇ ಅವರು ಅಲ್ಪಾವಧಿಯಲ್ಲಿ ಆಸ್ಥಾನ ಬಿಟ್ಟು ಕೊಟ್ಟರು. ಅವರು ಅಧ್ಯಕ್ಷರಾಗಿದ್ದಾಗ ಸದಸ್ಯಳಾದ ನಾನು, ನನ್ನ ಗೌರವ ಸೂಚಿಸಲು ಅವರ ಮನೆಗೆ ಹೋಗಿ ಅವರ ಖಾಸಗೀ ಸರಸ್ವತೀ ಮಂದಿರದಲ್ಲಿ ಭೇಟಿ ಮಾಡಿದೆ. ಮಾತನಾಡುತ್ತ, 'ನಿನ್ನನ್ನು ಬಿಸಿಮಾಡಬೇಕಮ್ಮ, ಈಗಲೇ ತಡವಾಗಿದೆ' ಅಂದರು (ರಾ.ಶಿ. ಯವರು ಮಾತಿನಲ್ಲಿಯೂ ಹಾಸ್ಯಗಾರರು!) ನಾನು 'ತಬ್ಬಿಬ್ಬಾ'ದಾಗ, ನಗುತ್ತ 'ನಿನಗೆ ಅಕಾಡಮಿ ಅವಾರ್ಡ್ ಕೊಡಬೇಕು' ವಿವರಿಸಿದರು. ನಂತರದ ಡಾ॥ ಹಾ.ಮಾ. ನಾಯಕರ ಅಧ್ಯಕ್ಷತೆಯ ಮೊದಲ ವರ್ಷ ಆ ಪ್ರಶಸ್ತಿಯನ್ನು ನಾನು ಪಡೆದ್ದನ್ನು ರಾ.ಶಿ.ಯವರು ಕಂಡರು. ನಾನು ಬರೆದಿರುವ ಅವರ ಕಿರು ಜೀವನ ಚರಿತ್ರೆ, ನನ್ನ ಗುರು ಕಾಣಿಕೆ.

ಈಗ ಕೊರವಂಜಿ ಇಲ್ಲ, ರಾ.ಶಿ.ಯವರು ಇಲ್ಲ. ಆದರೆ ಇಬ್ಬರೂ ಹಾಸ್ಯಾಭಿಮಾನಿಗಳಲ್ಲಿ ಹರಡಿಹೋಗಿದ್ದಾರೆ. ಕೊರವಂಜಿಯ ಮಗಳು 'ಅಪರಂಜಿ'ಯ ಹೊಣೆಯನ್ನು ರಾ.ಶಿ. ಯವರ ಮಕ್ಕಳು ಹೊತ್ತು. ಅಕ್ಕರೆಯಿಂದ ಬೆಳೆಸುತ್ತಿದ್ದಾರೆ. ತಾಯಿಯಂತೆ ಮಗಳು, ಕನ್ನಡಿಗರಿಗೆ ಹೊಸದೊಂದು ಸಾಲು ಖ್ಯಾತ ವಿನೋದ ಸಾಹಿತಿಗಳನ್ನು ಕೊಡುವಳೆನ್ನುವ ನಂಬಿಕೆ ನನ್ನದು.



# ಹುಡುಕಾಟ

– ಅರುಣಾ ಆರ್. ಕಾರಂತ

ಬೆಳಿಗ್ಗೆ ಏಳುತ್ತಲೇ ರಾಯರು ಮನೆಯಲ್ಲಿ ಏನನ್ನೋ ಹುಡಕತೊಡಗಿದ್ದಾರೆ. ತಮ್ಮ ಕಛೇರಿಯ ಫೈಲುಗಳು, ಪುಸ್ತಕದ ಕಪಾಟು, ಟ್ರಂಕು, ಹಾಸಿಗೆ, ಅಡಿಗೆ ಮನೆ, ಬಚ್ಚಲು ಎಲ್ಲೆಡೆಯಲ್ಲಿಯೂ ಏನೋ ಅಮೂಲ್ಯವಾದುದನ್ನು ಕಳೆದುಕೊಂಡವರಂತೆ ಗಂಭೀರವದನರಾಗಿ ಹಡರುತ್ತಿದ್ದಾರೆ. ಕುಡಿಯಲಿಟ್ಟ ಬೆಳಗಿನ ಕಾಫಿ ಹಾಗೆಯೇ ಆರುತ್ತಿದೆ, ಮನೆಯಾಕೆ ''ಅದೇನ್ರಿ ಹುಡುಕುತ್ತಿರೋದು? ಆಗಿಂದ ಮಾತಿಲ್ಲ, ಕತೆಯಿಲ್ಲ, ಏನಂತಾದ್ರೂ ಹೇಳಬಾರ್ದೆ'' ಎಂದಾಗ ರಾಯರು ಈ ಲೋಕಕ್ಕೆ ಬಂದು, ''ಅದೇ..... ಅದೇ ಆಗಿನಿಂದ ಹುಡುಕ್ತಿದೀನಿ, ಏನಂತ ತಿಳೀವಲ್ದು'' ಎಂದು ನಿಟ್ಟುಸಿರು ಬಿಟ್ಟರು, ''ಹಾಗಿದ್ರೆ ಸುಮ್ನಿರಿ ತಣ್ಣಗೆ. ಹುಡುಕಾಡಿ ಹೊತ್ತು ಕಳೆಯುವುದಕ್ಕಿಂತ ಕಛೇರಿಗ್ಹೋಗಲು ಅಣಿಯಾಗಿ'' ಎಂದಳು ಮನೆಯಾಕೆ. ''ಹೌದು, ನೀನ್ಹೇಳೋದೇನೋ ಸರಿ. ಆದರೆ ಆಫೀಸಿಗ್ಹೋದ ನಂತರ ನೆನಪಾದ್ರೆ ಅಲ್ಲಿಂದ ಓಡಿಬರೋಕಾಗತ್ತ್ಯೇ? ಏನೇ ಆಗಲಿ ಇನ್ನೂ ಗಂಟೆ ಏಳೂವರೆಯಷ್ಟೇ. ಇನ್ನೂ ಸ್ವಲ್ಪ ಹೊತ್ತು ಹುಡುಕ್ತೇನೆ. ಸಿಕ್ಕರೂ ಸಿಗಬಹುದು'' ಎಂದು ರಾಯರು ಮತ್ತೆ ತಮ್ಮ ಕೋಟಿನ ಕಿಸೆ ಝಡತಿ ಮಾಡಹತ್ತಿದರು. 'ನನ್ನ ಕರ್ಮ, ನಿಮ್ಮನ್ನ ಕಟ್ಟಿಕೊಂಡ್ನಲ್ಲ, ಹುಡುಕೋದು ಏನೂಂತ ತಿಳೀದೆ ಹುಡುಕಾಡಿದ್ರೆ ಸಿಗುತ್ತ್ಯೇ? ಕಳೆದದ್ದಾದ್ರೆ ಸಿಗುತ್ತೆ ಇಲ್ಲದ್ದನ್ನ ಹುಡುಕಾಡೋದಂದ್ರೆ ಗಾಳಿ ಜೊತೆ ಗುದ್ದಾಡಿದ ಹಾಗೆ'' ಎಂದು ಅಡಿಗೆ ಮನೆ ಸೇರಿದರು - ರಾಯರ ಪತ್ನಿ.

''ಅಮ್ಮಾ, ನನ್ನ ಪೆನ್ನು...'' ಎಂದು ಪುತ್ರ ರತ್ನ ರಾಗ ಎಳೆದರೆ, ಮಗಳು ''ನನ್ನ ರಿಬ್ಬನ್ನೆಲ್ಲಿ?'' ಎಂದು ಕಿರುಚಿದಳು. ''ದಿನಾ ಇದೇ ಹಣೆಬರಹ, ಶಾಲೆಯಿಂದ ಬಂದಾಕ್ಷಣ ನಿಮ್ಮ ನಿಮ್ಮ ಸಾಮಾನುಗಳನ್ನ ಎಲ್ಲೆಲ್ಲಿಡಬೇಕೋ ಅಲ್ಲೆ ಇಟ್ಟರೆ ಬೆಳಿಗ್ಗೆ ಎದ್ದು ಈ ರಾಮಾಯಣವಿರುತ್ತ್ಯೇ? ಅಲ್ಲಿ ನೋಡಿದರೆ ನಿಮ್ಮ ಅಪ್ಪ ಮನೆಯೆಲ್ಲ ಸಂತೆ ಮಾಡಿ ಹುಡುಕುತ್ತಿದ್ದಾರೆ ಇಲ್ಲಿ ನಿಮ್ಮ ಉದಯರಾಗ, ದಿನಾ ನಾನು ಇದನ್ನೇ ಮಾಡಲೇ, ನೀವೆಸೆದಿದ್ದನ್ನ ಎತ್ತಿ ಇಡೋದ್ರಲ್ಲೇ ನನ್ನ ಸೊಂಟ ಪೂರಾ ಬಿದ್ಹೋಯ್ತು. ಮನೆಯಲ್ಲಿ ಹೆಂಗಸ್ರಿಗೇನು ಕೆಲ್ಸ ಮತ್ತೆ ಅಂತಾರೆ ನಿಮ್ಮಪ್ಪ. ನನಗಾಗೋದಿಲ್ಲಪ್ಪ ನಿಂನಿಮ್ದು ಏನು ಬೇಕೋ ನೀವೇ ಹುಡುಕಿಕೊಳ್ಳಿ, ಹೋಂವರ್ಕ್ ಮಾಡದೇ ಇದ್ರೆ ಮೇಷ್ಟ್ರು ಕೈಯಿಂದ ಹೊಡ್ತ ತಿನ್ನಿ, ಆಗ ಬರುತ್ತೆ ಬುದ್ಧಿ'' ಎಂದಳಾ ಮಕ್ಕಳ ತಾಯಿ.



''ರೀ ಕಾಫಿ ತಣೀತಾ ಇದೆ, ಬಿಸಿ ಮಾಡಿಕೊಂಡು ತರಲೇ'' ಎಂದಾಗ ರಾಯರ ಮಡದಿ, ಪಕ್ಕದ ಮನೆಯ ಪುಕ್ಕಟೆ ಪೇಪರ್ ಗಿರಾಕಿ ಪುಟ್ಟಣ್ಣಯ್ಯ ಬಂದರು, ''ಏನ್ ರಾಯ್ರೇ ಕಾಫಿ ಆಯ್ತಾ, ಏನೋ ಹುಡುಕ್ತಾ ಇದ್ದಾಂಗಿದೆ'' ಎಂದರು, ''ಏನೂ ಇಲ್ಲ, ಲೇ, ಇವಳೇ ನಮ್ಮ ಪುಟ್ಟಣ್ಣಯ್ಯಂಗೂ ಕಾಫಿ ತಗೋಂಡ್ಬಾ'' ಎಂದು ಅಪ್ಪಣೆಸಿದರು ರಾಯರು. ಬಿಸಿ ಬಿಸಿಯಾಗಿ ಕಾಫಿ ತಂದಿಟ್ಟ ರಾಯರ ಪತ್ನಿ, ''ಏನೋ ನೋಡಿ ಈ ಮನೇಲಿ ಯಾರೂ ಯಾವುದನ್ನೂ ಎಲ್ಲಿಡ್ಬೇಕೋ ಅಲ್ಲಿಡಲ್ಲ. ತಾವು ಹುಡುಕೋದ್ರ ಜೊತೆ ನನ್ನ ತಲೆನೂ ತಿಂತಾರೆ'' ಎಂದರು ''ಲೇ ಸುಮ್ನಿರೇ, ಮೊದ್ಲೆ ನನ್ನ ತಲೆ ಬಿಸಿಯಾಗಿದೆ, ನೀ ಮತ್ತೆ ಇವ್ರ ಮುಂದೆ ವರದಿ ಒಪ್ಪಿಸಬೇಡ. ಅವ್ರಿಗೆಲ್ಲ ಗೊತ್ತಿದೆ ಎಲ್ಲರ ಮನೆಯಲ್ಲೂ ಇದ್ದದ್ದೇ ಸ್ವಲ್ಪ ಸಮಾಧಾನವಾಗಿ ಕಾಫಿ ಕುಡಿಯಲಿಕ್ಕೆ ಬಿಡು'' ಎಂದರು ರಾಯರು.

ಪುಟ್ಟಣ್ಣಯ್ಯ ಕಾಫಿ ಕುಡಿಯುತ್ತ, ''ಹಾಂ, ರಾಯರೇ ನಮ್ಮನೇಲೂ ಮೊದ್ಲು ಹಾಗೆಯೇ ಇತ್ತು ಯಾವ್ದೂ ಕೈಗೆ ಸಿಗ್ತಿರಲಿಲ್ಲ ನಿಮಗೊತ್ತಲ್ಲ ನಾನು ಶಿಸ್ತಿನ ಮನುಷ್ಯ, ಸ್ವಲ್ಪ ಅಸ್ತವ್ಯಸ್ತವಾದ್ರೂ ಸಹಿಸ್ತಿರಲಿಲ್ಲ. ಈ ಶಿಸ್ತಿನ ಪಾಠ ಹೇಳ್ತಾ ಹೇಳ್ತಾ ನನಗೆ ಬಿ.ಪಿ. ಏರಲಿಕ್ಕೆ ಸುರು ಆಯಿತು, ಆಸ್ಪತ್ರೆ, ಔಷಧ ಎಲ್ಲಾ ಆಯಿತು, ಮತ್ತೆ ಮನೆಗೆ ಬಂದಾಕ್ಷಣ ಯಥಾಸ್ಥಿತಿ ಅಕಸ್ಮಾತ್ತಾಗಿ ನಮ್ಮ 'ಡಿ.ವಿ.ಜಿ'ಯವರ 'ಮಂಕುತಿಮ್ಮನ ಕಗ್ಗ' ಕೈಗೆ ಸಿಕ್ತು 'ಓದ್ತಾ ಇದ್ದೆ. ಏನು ಸೊಗಸಾಗಿ ಬರೆದಿದ್ದಾರಂದ್ರಿ! ಪುಟ್ಟ ಪುಟ್ಟ ನಾಲ್ಕು ಸಾಲಿನ ಪದ್ಯಗಳ ಗುಂಪು ಎಷ್ಟೊಂದು ಅರ್ಥವತ್ತಾಗಿದೆ. ಪ್ರತಿ ಬಾರಿ ಓದಿದಾಗಲೂ ಹೊಸ ಹೊಸ ಅರ್ಥ ಹೊಳೀತದೆ. ಇಡೀ ಪುಸ್ತಕ ಒಟ್ಟಾರೆ ಓದುವುದಕ್ಕಿಂತ ಬಿಡಿ ಬಿಡಿಯಾಗಿ ಓದಿದರೆ ತುಂಬಾ ಖುಷಿ ಕೊಡ್ತದೆ. ಅದನ್ನು ಓದಿದ ನಂತರ ನನಗೆ ಭಗವದ್ಗೀತೆ ಬೇಡ ಇದೊಂದೆ ಸಾಕು ಎನ್ನಿಸಿತು. ''ಅಸಮದಲಿ ಸಮತೆಯನು ವಿಷಮದಲಿ ಮೈತ್ರಿಯನು... ವ್ಯಸನಮಯ ಸಂಸಾರದಲಿ ವಿನೋದವ ಕಾಂಬ ರಸಿಕತೆಯೇ ಯೋಗ'' ವ್ಹಾ, ಏನ್ ಪದ್ಯ ಅಂತೀರಿ 'ಸತ್ತೆನೆಂದೆನಬೇಡ..., ಹುಲ್ಲಾಗು ಬೆಟ್ಟದಡಿ... ನಿರ್ಮತ್ಸರತೆಯೊಂದು..., ಬದುಕು ಜಟಕಾಬಂಡಿ...' ಒಂದೇ ಎರಡೇ ಇದನ್ನ ಓದ್ಲಿಕ್ಕೆ ಸುರು ಮಾಡಿದ ಮೇಲೆ ನನ್ನ ಬಿ.ಪಿ. ತಲೆ ತಿರುಗುವುದು ಎಲ್ಲಾ ಮಾಯ.

ಯಾವುದೇ ಜಟಿಲ ಸಮಸ್ಯೆ ಬಂದರೂ ಅವರ ಯಾವುದಾದರೊಂದು ಪದ್ಯ ನೆನಪಿಗೆ ಬಂದು ಮನಸ್ಸು ಶಾಂತವಾಗುತ್ತಿತ್ತು.

'ಅಂದ ಹಾಗೆಯೇ ನಿನ್ನಿನ ಪೇಪರು ನೋಡಿದ್ರಾ,' ಎನ್ನುತ್ತ ಕೈಲಿದ್ದ ಪೇಪರ್ ಹಿಡಿದು 'ಅಮೇರಿಕದಲ್ಲಿ ಮನುಷ್ಯನ ಆರೋಗ್ಯದ ಮೇಲೆ ಒತ್ತಡದ ಪ್ರಭಾವ' ಅಂತ ಯಾರೋ ಸಂಶೋಧನೆ ನಡೆಸುತ್ತಿದ್ದಾರಂತೆ, ನಮ್ಮವರು ಈ ಹಿಂದೆ ಹೇಳಿ ಹಳೆತಾದದ್ದನ್ನ ಈಗ ಅವರು ಹೊಸತಾಗಿ ಕಂಡುಹಿಡಿದವರಂತೆ ಹೇಳಿ ಹಾರಾಡ್ತಾರೆ. ನಮಗೂ ಹಾಗೆ. ಅಮೇರಿಕದವರು ಹೇಳಿದ್ರೂ ಅಂದ್ರೆ ಒಪ್ಕೊತೀವಿ, ಹೀಗೆಯೇ ಅವರು ಹೇಳಿದ್ದೆಲ್ಲ ಸತ್ಯ ಎಂದು ನಂಬಿ ಯಾವ ಆಹಾರ ತಿನ್ಬೇಕಾದ್ರೂ, ನೂರು ಸಲ ಯೋಚಿಸಬೇಕಾಗಿದೆ ಎಂದು ಪೇಪರನ್ನ ಟೀಪಾಯಿಯ ಮೇಲಿಟ್ಟರು.

''ಪುಟ್ಟಣ್ಣಯ್ಯ, ಇದನ್ನೇ ನೋಡಿ ನಾನು ಆಗಿನಿಂದ ಹುಡುಕ್ತಾ ಇದ್ದದ್ದು. 'ಲೇ ಇವಳೇ, ಸಿಕ್ತು ಅಬ್ಬ ನೆಮ್ಮದಿಯಾಯ್ತು. ನಿನ್ನೆ ಪೇಪರನ್ನೇ ನಾನಿಷ್ಟೊತ್ತು ಹುಡುಕ್ತಾ ಇದ್ದದ್ದು. ಅದರಲ್ಲಿ ಏನೊ ಒಂದು ಇಂಪಾರ್ಟೆಂಟ್ ವಿಷ್ಯ ಇತ್ತು ನಮ್ಮಾಫೀಸಿಗೆ ಸಂಬಂಧ ಪಟ್ಟಿದ್ದು ಅದನ್ನ ಕಟ್ ಮಾಡಿ ಇಡಬೇಕೆಂದು ಯೋಚಿಸಿದ್ದೆ. ಈ ಪೇಪರ್ ನೋಡಿದ್ಮೆಲೆ ನೆನಪಿಗೆ ಬಂತು ನೋಡಿ'' ಎಂದರು ರಾಯರು. ''ಹೌದಾ, ಅದನ್ನ ಆಗಲೇ ಹೇಳಿದ್ದಿದ್ರೆ ನಾನೇ ಹೇಳ್ತಿರಲಿಲ್ವೇ, ನಿನ್ನೆ ಪುಟ್ಟಣ್ಣಯ್ಯನ ಹೆಂಡ್ತಿ ಮಧ್ಯಾಹ್ನ ಊಟ ಮುಗಿಸಿ ಬಂದಾಗ ನಾನೊಂದು ಕ್ಷಣ ಓದ್ಕೊಂಡು ತರ್ತೀನೆ ಅಂದ್ರು ನಾನೆ ತೆಕ್ಕೊಟ್ಟೆ. ಅಯ್ಯೋ ದೇವ್ರೆ,'' ಎಂದರು ರಾಯರ ಪೆದ್ದುತನ ನೋಡಿ ಮಡದಿ.

''ರಾಯರೇ, ಏನ್ ತಪ್ಪು ತಿಳ್ಕೊಬೇಡಿ, ಈ ನಿಮ್ಮ ಹುಡುಕಾಟ ನೋಡಿದರೆ ನನಗೇನನ್ನಿಸುತ್ತೆ ಗೊತ್ತಾ, ಈ ಬದುಕೇ ಒಂದು ಹುಡುಕಾಟ. ಹುಟ್ಟಿದಂದಿನಿಂದ ಬಯಕೆಯ ಬೆನ್ನು ಹತ್ತಿ ಅವುಗಳನ್ನ ಹುಡುಕುವುದರ ಜೊತೇಲಿ ಮನುಷ್ಯ ಸಂಬಂಧಗಳನ್ನು ಹುಡುಕ್ತಾ ಇದ್ದೇವೆ. ಯಾರು ನಮ್ಮವರು, ಯಾವುದು ನಮ್ಮದು, ಎಂದು ತಿಳಿಯದೆ ಗೊಂದಲಕ್ಕೀಡಾಗ್ತೇವೆ. ಆದ್ರೆ ಎಲ್ಲಾ ನೋಡಿ ನಾವು ತಿಳಿದ್ಹಾಂಗಿದೆ 'ಪಾ.ವೆಂ.' ಅಂದ್ಹಾಗೆ, ''ಅಸ್ತವ್ಯಸ್ತತೆಯಲ್ಲೂ ಆನಂದ ಇದೆ'' ಅಂತ ತಿಳ್ಕೊಂಡ್ರೆ ಈ ಹುಡುಕಾಟದಲ್ಲಿ ಒಂದು ತರಹ ಬದುಕನ್ನ ಜೀವಂತವಾಗಿರಿಸುವ ಶಕ್ತಿಯಿದೆ ಅನ್ನಿಸುವುದಿಲ್ಲವೇ? ನಮ್ಮ ಪುಟ್ಟಣ್ಣಯ್ಯ ಏನೋ ಅಂತಿದ್ದೆ ನನ್ಮಾತನ್ನ ನನಗೇ ತಿರುಗಿಸಿದ್ರಲ್ಲ'' ''ಅಹ್ಹಹ್ಹಹ್ಹ'' ಎಂದು ಇಬ್ಬರೂ ನಕ್ಕರು.

# ರಾಜರತ್ನಂ

– ಅ.ರಾ.ಸೇ.

ರಾಜರತ್ನಂ ನನಗೆ ಉಪಾಧ್ಯಾಯರಾಗಿದ್ದರು. ನಾನು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿರುವಾಗ ಅವರು ನಮಗೆ 'ಶ್ರೀ' ಯವರ 'ಪಾರಸಿಕರು' ಎಂಬ ನಾಟಕವನ್ನು ಬೋಧಿಸುತ್ತಿದ್ದರು. ನಮ್ಮ ತರಗತಿಯಲ್ಲಿದ್ದವರು ಒಂದು ನೂರಾ ಹನ್ನೊಂದು. ಅದೆಂಥದೋ 'ನೆಲ್ಸನ್' ಎಂದು ಕ್ರಿಕೆಟ್ ಪರಿಭಾಷೆ. ನಮ್ಮ ತರಗತಿಯಲ್ಲಿ ಒಬ್ಬ ಎಓ.ಸಿ.ಸಿ. ಕ್ಯಾಪ್ಟನ್ ಇದ್ದ. ಸಂಭಾವಿ.

ಒಂದು ದಿನ ರಾಜರತ್ನಂ ತರಗತಿಯಲ್ಲಿ ಜೇಬುಗಳನ್ನು ತಡಕಾಡಿ, ಸೀಮೇಸುಣ್ಣ ತಂದಿಲ್ಲ! ಎಂದು ಉದ್ಗರಿಸಿದರು. ಉಪಾಧ್ಯಾಯರಿಗೆ ಆಗಾಗ ಆಗುವ ಆಘಾತ ಇದು. ಒಮ್ಮೆ ನಾನು ಇನ್ಸ್‌ಪೆಕ್ಷನ್ ದಿನ ಪಠ್ಯಪುಸ್ತಕವನ್ನೇ ಮರೆತುಹೋಗಿದ್ದೆ ಅದು ಬೇರೆ ಸುದ್ದಿ. ರಾಜರತ್ನಂ 'ಯಾರ ಬಳಿಯಾದರೂ ಚಾಕ್‌ಪೀಸ್ ಇದೆಯೇ' ಎಂದು ಕೇಳಿದರು. ನಮ್ಮ ತರಗತಿಯ ಎಓ.ಸಿ.ಸಿ. ಕ್ಯಾಪ್ಟನ್ ತನ್ನ ಜಾಗದಿಂದ ಅವರ ಮೇಜಿಗೆ ಬೀಳುವಂತೆ ಚಾಕ್‌ಪೀಸ್ ಎಸೆದ. ರಾಜರತ್ನಂ ಕೋಪಗೊಂಡರು 'ಯಾರದು' ಎಂದು ಗುಡುಗಿದರು. ತರಗತಿಯಲ್ಲಿ ನಿಶ್ಶಬ್ದ. 'ಯಾರು ಎದ್ದುನಿಂತುಕೊಳ್ಳಿ' ಎಂದರು. ಕ್ಯಾಪ್ಟನ್ ತಪ್ಪಿತಸ್ಥನಂತೆ ಎದ್ದುನಿಂತುಕೊಂಡು ಏನನ್ನೋ ಗೊಣಗಿದ. ರಾಜರತ್ನಂ 'ಏನದು ಮಾತು?' ಎಂದರು ಕ್ಯಾಪ್ಟನ್ ಇನ್ನೇನೋ ಗೊಣಗಿದ.

'ಇದಿರು ಮಾತೋ?'

'ನಾನೇನೂ....' ಎಂದು ಕ್ಯಾಪ್ಟನ್ ಪ್ರತಿಭಟಿಸಿದ. ರಾಜರತ್ನಂ ತೋಳು ಮೇಲೇರಿಸಿದರು. 'ಬಾ ನನ್ನ ಜೊತೆಗೆ' ಎಂದು ಯುದ್ಧಕ್ಕೆ ಆಹ್ವಾನಿಸಿದರು. ಕ್ಯಾಪ್ಟನ್ ಯಥಾಪ್ರಕಾರ ಗೊಣಗಿದ. ರಾಜರತ್ನಂ ಅವನ ಬಳಿಗೆ ಬಂದು ಅವನನ್ನು ಹೊರಕ್ಕೆ ದಬ್ಬಿ ತಾವೂ ಹೊರಗೆ ಹೋದರು. ಸ್ವಲ್ಪ ಹೊತ್ತಿನ ನಂತರ ಇಬ್ಬರೂ ನಗುತ್ತಾ ತರಗತಿಗೆ ಬಂದರು.

'ನಮ್ಮ ಕ್ಯಾಪ್ಟನ್, ಕುಸ್ತಿಗೆ ಕರೆಯುತ್ತಾನೆಂದುಕೊಂಡೆ. ಇಲ್ಲ. ಮೇಷ್ಟರ ಮುಖಕ್ಕೆ ಚಾಕ್‌ಪೀಸ್, ಒಗೆಯಬಾರದೆಂದು ಅವನಿಗೆ ಗೊತ್ತಿರಲಿಲ್ಲ, ಅಷ್ಟೇ' ಎಂದರು ಬಳಿಕ ಚಾಕ್ ಪೀಸನ್ನು ಕೈಯಲ್ಲಿ ಹಿಡಿದು

'ದೇವಾಧಿ ದೇವಾ, ಮಹದೇವ,

ನೀನ್ ಮುರಿದೆ ಪಾರಸಿಕರುಕ್ಕನ್'

ಎಂದು ಚಾಕ್‌ಪೀಸ್ ಮುರಿದರು.

ಆರು ತಿಂಗಳ ಕಾಲ ಅವರ ಪಾಠ ಕೇಳಿದ ಫಲವಾಗಿ ನನಗೆ ಹಳೆಗನ್ನಡ ಕಾವ್ಯಗಳು ನೇರವಾಗಿ ಅರ್ಥವಾಗತೊಡಗಿದವು. ಆ ಕೊಬ್ಬು ನನಗೆ ಬಹಳ ಕಾಲವಿತ್ತು. ಒಂದು ದಿನ ನನ್ನ ಮಿತ್ರರೊಬ್ಬರಿಗೆ (ಅವರೀಗ ಕನ್ನಡ ಪ್ರೊಫೆಸರ್) 'ಒಂದು ಕಾಫಿ, ಒಂದು ಸಿಗರೇಟ್, ಒಂದು ಅರ್ಥವಾಗದ ಪದ್ಯ, ಐದು ನಿಮಿಷ ಇಷ್ಟನ್ನು ಕೊಡಿ, ನಾನು ಅರ್ಥ ಹೇಳಿಬಿಡುತ್ತೇನೆ' ಎಂದೆ.

ಅವರು ತಕ್ಷಣ ಆ ಕೆಲಸ ಮಾಡಿದರು. ಅವರು ಕೊಟ್ಟ ಪದ್ಯ, ಕಬ್ಬಿಣದ ಕಡಲೆ, ರಾಜರತ್ನಂ ನೆನೆದೆ ಮೂರೇ ನಿಮಿಷದಲ್ಲಿ ಅದರರ್ಥ ಸ್ಫುರಿಸಿತು. ಹಾಗಿತ್ತು ಅವರು ಪಾಠಹೇಳುವ ವೈಖರಿ.

ನಾನು ಅವರ ಶಿಷ್ಯನಾಗಿದ್ದಾಗ ರನ್ನನ ಸಹಸ್ರ ವಾರ್ಷಿಕೋತ್ಸವವನ್ನು ಆಚರಿಸಲು ರಾಜರತ್ನಂ ಉದ್ದೇಶಿಸಿ, ಪೂರ್ವಭಾವೀ ಸಭೆ ಕರೆದರು. ಆ ಸಭೆಗೆ ಸೇರಿದವರು ನಾಲ್ಕು ಜನ. ರಾಜರತ್ನಂ, ವೀ.ಸೀ., ನಾನು, ನನ್ನ ಮಿತ್ರ ತಮ್ಮಣ್ಣ. ಅರ್ಧಗಂಟೆ ಕಾದರೂ, ಇನ್ನೊಬ್ಬ ಮನುಷ್ಯನಿರಲಿ, ಸೊಳ್ಳೆಯೋ, ನೊಣವೂ ಕೂಡಾ ಬರಲಿಲ್ಲ. ಸಭೆ ಬರಖಾಸ್ತಾಯಿತು.

೧೯೭೨ರಲ್ಲಿ ರಾ.ಶಿ.ಯವರು ನನ್ನನ್ನು ಕರೆಸಿಕೊಂಡು ನನ್ನ ಕವನಗಳ ಸಂಕಲನವೊಂದನ್ನು ಕೊರವಂಜಿಯು ಪ್ರಕಟಿಸಲು ಯೋಜಿಸಿದೆ ಎಂದರು.

ನನ್ನಲ್ಲಿ ನನ್ನ ಪ್ರಕಟಿತ, ಲೇಖನಗಳಾಗಲೀ ಅವುಗಳ ಹಸ್ತಪ್ರತಿಯಾಗಲೀ ಇಲ್ಲವೇ ಇಲ್ಲ. ಎಂದೆ. ಅವರು ಕೆಲವು ಕೊರವಂಜಿ ಸಂಪುಟಗಳನ್ನು ನನಗೆ ಕೊಟ್ಟರು. ನನ್ನ ಕೆಲವು ಪದ್ಯಗಳಿರುವ ಸಂಪುಟಗಳು ಗಾಂಧೀ ಸಾಹಿತ್ಯ ಭವನದ 'ಗಂಧದ ಗುಡಿ'ಯಲ್ಲಿವೆ. ರಾಜರತ್ನಂ ಕೇಳು ಕೊಡಿಸುತ್ತಾರೆ ಎಂದರು. ಆಗಲೇ ಸಂಜೆಯಾಗಿತ್ತು. ರಾಜರತ್ನಂ ಮನೆ ಇದ್ದದ್ದು ಮಲ್ಲೇಶ್ವರಂ ಹದಿನೇಳನೆಯ ಅಡ್ಡರಸ್ತೆಯಲ್ಲಿ. ಅವರು ಸಿಕ್ಕುವುದೂ ಸ್ವಲ್ಪ ತಡವಾಗಿ, ಆದುದರಿಂದ ಸ್ವಲ್ಪ ತಿಂಡಿ ತಿನ್ನೋಣವೆಂದು ಮಲ್ಲೇಶ್ವರಂ ಟಿಫಿನ್‌ರೂಮಿಗೆ ಹೋದೆ. ಗಲ್ಲಾ ಪೆಟ್ಟಿಗೆ ದಾಟುತ್ತಿದ್ದಂತೆಯೇ ರಾಜರತ್ನಂ ಎದುರಿಗೆ ಬಂದರು. ಮಾತನಾಡಲು ಹೋದೆ ಧ್ವನಿ ಬರಲಿಲ್ಲ. ಅವರು ಬಿಲ್ ಕೊಡುವಾಗ ಅವರ ಹಿಂದೆಯೇ ನಿಂತು ಹೊರಹೊರಟೊಡನೆ 'ಸಾ' ಎಂದೆ. ಅವರು ತಿರುಗಿ ನೋಡಿ 'ಯಾರು ನೀವು' ಎಂದು ಕೇಳಿದರು.

'ನಾನು ಸೇತೂರಾಮ ಎಂದೆ'

'ಏನಾಗಬೇಕು?' ಎಂದರು

'ರಾಶಿಯವರು ಹೇಳಿದರು. ನಿಮ್ಮನ್ನು....?

'ಏನು? ಸೇತೂರಾಮ ಎಂದರೆ ಯಾರು. ನನ್ನ ಹತ್ತಿರ ಡಾಕ್ಟರು ಏಕೆ ಕಳಿಸಿದರು?'

'ನಾನು ಅ.ರಾ.ಸೇ.' ಎಂದೆ.

ಅವರ ಮುಖ ನಗುವಿನಿಂದ ಅರಳಿತು. ಎರಡೂ ಕೈಗಳನ್ನು ತೆರೆದು ತಬ್ಬಿಕೊಂಡರು.

'ಏನಪ್ಪಾ ನಿನ್ನನ್ನು ಎಷ್ಟು ಹುಡುಕುವುದು? ದಾವಣಗೆರೆಗೆ ಬಂದೆ. ನೀನು ಸಿಕ್ಕಲಿಲ್ಲ. ಎಲ್ಲಿದ್ದೀ? ಎಷ್ಟು ಓದಿದ್ದೀ? ಕನ್ನಡ ಕಾವ್ಯಗಳನ್ನು ಎಷ್ಟು ಸಾರ್ಥಕವಾಗಿ ನಿನ್ನ ಲೇಖನಗಳಲ್ಲಿ ಉದ್ಧರಿಸುತ್ತೀ? ಯಾರು ನಿನಗೆ ಕಾವ್ಯಪಾಠ ಮಾಡಿದರು?' ಎಂದು ಆರಂಭಿಸಿ ನನ್ನ ಬರಹಗಳ ಬಗೆಗೆ ಮೆಚ್ಚುಗೆ, ನನಗೆ ಕಾವ್ಯಪಾಠ ಹೇಳಿಕೊಟ್ಟವರ ಬಗೆಗೆ ಪ್ರಶಂಸೆ ವ್ಯಕ್ತಪಡಿಸಿದರು.

ಬಳಿಕ 'ಬಾ ಇಲ್ಲಿ, ನಿನಗೆ ನಾನು ದೋಸೆ ಕೊಡಿಸಬೇಕು' ಎಂದು ಕರೆದುಕೊಂಡು ಹೋಗಿ ದೋಸೆ ಕೊಡಿಸಿದರು.

'ದೋಸೆಯನ್ನು ಕಂಡುಹಿಡಿದವನು ಅಗಸ ಎಂದು ನೀನು ಮಾಡಿರುವ ಸಂಶೋಧನೆ ಅದ್ಭುತ' ಎಂದರು.

ದೋಸೆ ತಿನ್ನುತ್ತಾ 'ನಾನು ನಿಮ್ಮ ಶಿಷ್ಯ ಸಾ. ನೀವು 'ಪಾರಸಿಕರು' ಬೋಧಿಸಿದ್ದೇ ನನ್ನಲ್ಲಿರುವ ಗ್ರಾಸ' ಎಂದೆ.

ಆದಿನ ಅವರು ನನಗೆ ತಮ್ಮ ಅನೇಕ ಪುಸ್ತಕಗಳನ್ನು ಕೊಟ್ಟರು.

ಅದರಲ್ಲಿ ಮುಖ್ಯವಾದದ್ದು 'ನಿರ್ಭಯಾಗ್ರಫಿ' ಕನ್ನಡದ ವಿಡಂಬನ ಸಾಹಿತ್ಯದಲ್ಲಿ ಅತ್ಯಂತ ಅಮೋಘವಾದ ಕೃತಿ. ಆದರೆ ಅದು ನಮ್ಮ ಹಾಸ್ಯಸಾಹಿತಿಗಳ ಗಮನಕ್ಕೆ ಸಾಕಷ್ಟು ಬಂದಿಲ್ಲ. ಅವರ 'ಹನಿಗಳು' ಬೇರೆ ಸಾಹಿತ್ಯಗಳಿಂದ ಸುಭಾಷಿತಗಳನ್ನು ಕನ್ನಡಕ್ಕೆ ತಂದ ಗ್ರಂಥ. ಮೊದಲ ಹನಿ ಅಥವಾ ಮಿನಿ ಅಥವಾ ಚುಟುಕು ಗ್ರಂಥ ಎಂದುಕೊಂಡಿದ್ದೇನೆ.

ಈ ವರ್ಷ ಜನವರಿಯಲ್ಲಿ ಮೊಳಕಾಲ್ಮುರುವಿನಲ್ಲಿ ಚಿತ್ರದುರ್ಗದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಆಗ ರಾಜರತ್ನಂ ಅವರ ಹನಿಗವನವೊಂದನ್ನು ಅ.ರಾ. ಮಿತ್ರ ಅವರು ಉದ್ಧರಿಸಿದರು

ಗುರು ಮಹಾವಾಗ್ಮಿ

ನಿಂತು ಮಾತಾಡಿದರೆ ಗಂಟಲು ಕಂಚು

ಶಿಷ್ಯರೋ ಏಳೇಜನ

ಗೋಡೆ ನಾಲ್ಕರ ಜೊತೆಗೆ ಮೂರು ಬೆಂಚು

ಸುಮಾರು ಮೂರುಸಾವಿರ ಜನ ಅದನ್ನು ಕೇಳಿ ನಕ್ಕಾಗ ರಾಜರತ್ನಂ ಇನ್ನೂ ಇದ್ದಾರೆ ಎನ್ನಿಸಿತು.

ಅವರ ಇನ್ನೊಂದು ಹನಿಗವನ - ಬಹುಶಃ ತೆಲುಗಿನಿಂದ ಬಂದದ್ದು - ಹೀಗಿದೆ

ಇತ್ತ ಮಾತಿಗೆ ತಪ್ಪಿ ನಡೆದವ

ಕತ್ತೆ ಮಗನೆಂದೊಬ್ಬನೊಬ್ಬನ ಬೈಯುವುದ ಕೇಳಿ

ಹೆತ್ತೆನೇ ನಾನಿಂಥಮಗನನೆನುತ್ತ

ಕತ್ತೆ ಯುಮತ್ತುದ್ದೈ ಧೃತರಾಷ್ಟ್ರ ಕೇಳೆಂದ

ಎಂತಹ ಚಾಟುವಾಕ್ಯ - ಕೊನೆಗೆ ಧೃತರಾಷ್ಟ್ರ ಕೇಳೆಂದ. ಅದನ್ನು ಅನುಭವಿಸಿ ನಗಬೇಕು.

ರಾಜರತ್ನಂ ಬಾಲ ಸಾಹಿತ್ಯದ ಪ್ರಮುಖ ಬರಹಗಾರರು. ಅವರ 'ಓಬೀರಾಯನ ಕಾಲದಲಿ' ಎನ್ನುವುದು ಹೊಸಗನ್ನಡದ ಪ್ರಥಮ ನಾನ್ಸೆನ್ಸ್ ವರ್ಸ್‌ಗಳಲ್ಲಿ ಒಂದು, ಅದರಲ್ಲಿ ಕೇವಲ ಅಸಂಬದ್ಧ ಹೇಳಿಕೆಗಳು ಮಾತ್ರವೇ ಇಲ್ಲ. ಅದು ಸಾರ್ವಕಾಲಿಕವಾದ ರಾಜಕೀಯ ವಿಡಂಬನೆ ಕೂಡ.

ಬೌದ್ಧ ಸಾಹಿತ್ಯದ ಪರಿಚಯ ನನಗೆ ನಲವತ್ತರ ಐವತ್ತರ ದಶಕದಲ್ಲಿ ರಾಜರತ್ನಂ ಅವರ ಪುಸ್ತಕಗಳಿಂದಲೇ ಆಯಿತು. ಅಂಥ ಪುಸ್ತಕಗಳು 'ಭುವನ ಜನದ ಭಾಗ್ಯ'ದಿಂದ ಮಾತ್ರವೇ ಬಂದಾವು.

ಒಮ್ಮೆ ರಾಶಿಯವರ ಮನೆಗೆ ಹೋಗಿದ್ದೆ. ಅವರು ಎಲ್ಲಿಯೋ ಹೊರಟಿದ್ದರು. ನಾನು 'ನಾಳೆ ಬರುತ್ತೇನೆ' ಎಂದೆ. 'ನಾಳೆ ಬೇಡ, ಈಗಲೇ ಬಾ, ಇವತ್ತು ರಾಜರತ್ನಂಗೆ ಸನ್ಮಾನವಿದೆ' ಎಂದು ನನ್ನನ್ನೂ ಕರೆದುಕೊಂಡು ಹೋದರು. ಅಂದು ಮಾಸ್ತಿಯವರ ಪಕ್ಕದಲ್ಲೇ ಕುಳಿತುಕೊಂಡು ಮಾತನಾಡುವ ಅವಕಾಶ ದೊರೆಯಿತು. ರಾಶಿಯವರ ಸಂಭ್ರಮ ಹೇಳತೀರದು. ತಮಗೇ ಸನ್ಮಾನವಾಗುತ್ತಿದ್ದರೂ ಯಾರೂ ಅಷ್ಟು ಖುಷಿಪಡಲು ಸಾಧ್ಯವಿಲ್ಲ. ರತ್ನಾಕರವರ್ಣಿ, ನಯಸೇನ, ಮುದ್ದಣ, ಕೈಲಾಸಂ ಮೊದಲಾದವರ ಬರಹಗಳಿಂದ ಹಾಸ್ಯವನ್ನು ಆಯ್ದು ಸಮರ್ಥವಾಗಿ ಪರಿಚಯಿಸುವುದು ಅವರ ಪುಸ್ತಕಗಳನ್ನು ಓದುವುದು, ಅರಗಿಸಿಕೊಳ್ಳುವುದು ಹಾಸ್ಯಬರಹಗಾರರಿಗೆ ಅತ್ಯಂತ ಅಗತ್ಯ. ಆ ಕೆಲಸ ಹೆಚ್ಚು ಆದಷ್ಟೂ ಗಟ್ಟಿ ಹಾಸ್ಯದ ನಿರ್ಮಾಣವಾಗುತ್ತದೆ. ಅಧ್ಯಯನ ಮಾಡದೆ ಬರೆಯಬಾರದು. ಬರವಣಿಗೆಗೆ ಶಿಸ್ತು ಅಗತ್ಯ ಎಂದು ರಾಜ್ಯರತ್ನಂ ಮತ್ತೆ ಮತ್ತೆ ಪ್ರತಿಪಾದಿಸುತ್ತಿದ್ದರು.

ಅವರ ಹಾಸ್ಯ ಸಂಪೂರ್ಣ ವೈಭವದಲ್ಲಿ ಕಂಡುಬರುವುದು ಮಹಾಕವಿ ಪುರುಷ ಸರಸ್ವತಿಯ ಸೃಷ್ಟಿಯಲ್ಲಿ.

ಕನ್ನಡ ಕವಿಯೊಬ್ಬನು ತನ್ನನ್ನು ಗಂಡು ಶಾರದೆ ಎಂದು ಕರೆದುಕೊಂಡಿದ್ದಾನೆ. ಬಹುಶಃ ಪುರುಷ ಸರಸ್ವತಿ ಎಂಬ ಹೆಸರಿಗೆ ಅದೇ ಪ್ರೇರಣೆಯಿರಬಹುದು. ಈ ಹೆಸರನ್ನು ಕವಿಗಿಡಲೂ ಒಂದು ಕಾರಣವಿದೆ. 'ಕವಿಚರಿತ್ರೆ'ಯ ನಿರ್ಮಾಣವಾದಾಗ ಕನ್ನಡ ಕವಿಗಳ ಕಾಲ, ಅವರ ಮತ, ಅವರು ಯಾವ ದೇವರ ಭಕ್ತರು, ಎಲ್ಲಿದ್ದರು ಇತ್ಯಾದಿಯಾಗಿ ವಾದ ವಿವಾದಗಳು ಪುಂಖಾನುಪುಂಖವಾಗಿ ಬರುತ್ತಿದ್ದವು.

ಪುರುಷ ಸರಸ್ವತಿ ಇನ್ನು ಒಂದು ಹೆಜ್ಜೆ ಮುಂದು. ಏಕೆಂದರೆ ಹೆಸರಿನಿಂದಲೇ ಅವನು ಗಂಡೋ ಹೆಣ್ಣೋ ಎಂಬ ಶಂಕೆ ಉದ್ಭವಿಸುತ್ತದೆ.

ಇನ್ನು ಅವನ ಕಾಲ. ಕವಿಗಳ ಕಾಲ ನಿರ್ಧಾರದಲ್ಲಿ ಅವರು ನೆನೆಸಿರುವ ಕವಿಗಳೂ ಒಂದು ಮುಖ್ಯಾಂಶ. ಪುರುಷ ಸರಸ್ವತಿಯು ಯಾವ ಕವಿಗಳನ್ನು ನೆನೆಸಿಲ್ಲವಾದುದರಿಂದ ಅವನು ಕನ್ನಡದ ಆದಿಕವಿ!

ಅವನ ಕಾವ್ಯದ ತಾಳೆಗರಿ ಓಲೆಗಳ ವರ್ಗೀಕರಣದ ಪ್ರಶ್ನೆ. ಅವರು ಅಟ್ಟದ ಪ್ರತಿ, ಪಾತಾಳದ ಪ್ರತಿ ಎಂದು ಎರಡು.

ಅವನು ಶೈವನೋ ವೈಷ್ಣವನೋ ಎಂಬ ಪ್ರಶ್ನೆ. ಅದನ್ನು ಕುರಿತು ಕಾವ್ಯ ಹೀಗೆ ಹೇಳುತ್ತದೆ.

ಅಂಬುಜೋದ್ಭವ ಮೊದಲು ಸುಪ್ರಾ

ರಂಭದಲಿ ನಾರಾಯಣನು ಮೇಣ್

ಶಂಭು ತಾನಾದಿಯಲಿ ಹರಿಸಿದ ಕಾವ್ಯ ಅವನದು. ಮೊದಲು ಬಹ್ಮನೂ, ಪ್ರಾರಂಭದಲ್ಲಿ ನಾರಾಯಣನೂ, ಶಿವನು ಆದಿಯಲ್ಲೂ ಅವನ ಕಾವ್ಯವನ್ನು ಹರಸಿದರಂತೆ! ಹಾಗಾದರೆ ಅವನು ಶೈವನೋ, ವೈಷ್ಣವನೋ! ಕರ್ಣಾಟಕ ಸರಿಯೋ ಕರ್ನಾಟಕ ಸರಿಯೋ ಎಂಬ ವಾದ ಭಯಂಕರವಾಗಿದ್ದಾಗ ಪುರುಷ ಸರಸ್ವತಿಯ ಕಾವ್ಯದ ಶೋಧನೆಯಾಯಿತು.

ಅರ್ಜುನನ ಬಾಣದಿಂದ ಹಾರಿ ಬಂದ ಕರ್ಣ ಗೋದಾವರಿಯ ಉತ್ತರ ತೀರದ ಬಂಡೆಯ ಮೇಲೆ ಪುಟ ನೆಗೆದು ಕಾವೇರಿಯ ದಕ್ಷಿಣ ತೀರದ ಬಂಡೆಯ ಮೇಲೆ ಬಂದು ನಿಂತು, ನದಿಗಳೆರಡರ ನಡುವಿನ ಭೂಭಾಗಕ್ಕೆ ಕರ್ಣ ನಾಟಕ ಎಂದು ಹೆಸರಿಟ್ಟನಂತೆ ಕನ್ನಡಿಗರಿಗೂ ಅವನದೇ ಗುಣ ಬಂದಿದೆ.

'ಹರಿದು ತಣಿಯರು, ಹಂಚಿ ತಣಿಯರು,

ಸುರಿದು ಸೂರೆಯನಿಟ್ಟು ತಣಿಯರು.'

ತುಂಗಭದ್ರೆ, ಕೃಷ್ಣೆ ಆಂಧ್ರಕ್ಕೆ, ಕಾವೇರಿ ತಮಿಳರಿಗೆ

ಇನ್ನೇನು ಬೇಕು, ಪುರುಷ ಸರಸ್ವತಿಯ ಭವಿಷ್ಯ ವಾಣಿಗೆ!

ಇದು ಕರ್ಣಸಾಟಕ ಪುರಾಣ ಮೂಲಹಂದರ.

ಇದಾದ ಮೇಲೆ 'ಹಾರ್ಮೋನಿಯಂ ಹರಣ' ಅಥವಾ 'ನಿಂಗ ನಿರ್ಯಾಣ'. ನಿಂಗನೆಂಬುವನು ತನ್ನ ಓದಿಗೆ ಅಡ್ಡಬಂದ ವೆಂಕಟಾರ್ಯರ ಮತ್ತು ವೆಂಕೂಬಾಯಿಯ ಹಾರ್ಮೋನಿಯಂ ಅನ್ನು ಕದ್ದ ವೃತ್ತಾಂತ.

ಮಗಳಿಗೆ ಗಂಡು ಹುಡುಕಲೆಂದು ಹಾರ್ಮೋನಿಯಂ ಅನ್ನು ತಂದು ವೆಂಕಟಾರ್ಯರು ವೆಂಕೂಬಾಯಿಗೆ ಪುಸ್ತಕ ನೋಡಿಕೊಂಡು ಪಾಠ ಹೇಳಿದರು. ಅವರನ್ನು ಖೂನಿ ಮಾಡಬೇಕೆಂದು ನಿಂಗನಿಗೆ ಎನ್ನಿಸಿದರೂ, ಬುದ್ಧನು ಅಹಿಂಸೆಯನ್ನು ಬೋಧಿಸಿರುವುದಕ್ಕೆ ಮನ್ನಣೆ ಕೊಟ್ಟು, ಹಾರ್ಮೋನಿಯಂ ಕದ್ದುಬಿಟ್ಟ - ನಿಂಗ, ಆದರೆ ಅದು ಕೊಯ್ಯಿ ಎಂದಿತು, ಹಾಳು ತಿದಿ ಮುಚ್ಚಿರದೆ ಹೋಯಿತಲಾ' ವೆಂಕಟಾರ್ಯರು ನಿಂಗನನ್ನು ಕುಕ್ಕರಬಡಿಸಿ, 'ನಾನು ಮಗಳಿಗೆ ಹೇಳಿಕೊಡುವ ಪಾಠವನ್ನು ಕೇಳುತ್ತಾ ಕೂಡುವುದೇ ನಿನಗೆ ನಾನು ಕೊಡುವ ಶಿಕ್ಷೆ' ಎಂದರು.

ನಿಂಗನು

'ಉರಿವ ಶಿಕ್ಷೆಯನಿದನು ತಾನೊಂ

ದೆರಡು ದಿನ ಸಹಿಸಿದನು ತದನಂ

ತರದೊಳಾಗದೆ ತಡೆಯಲಾಗದೆ ಬಿಡಲು ಮಾಗದಿರೆ

ಮರಣವೇ ಶರಣೆಂದು ಬೈಳಾ

ಪುರದ ಕೆರೆಯನು ನೆಗೆದ ನಿಂಗನ

ಸುರರು ಕೈ ಹಿಡಿದೊಯ್ದರು...'

ಆದರಿದು ಲಾಕ್ಷಣಕರ ನಿಯಮಕ್ಕೆ ವಿರುದ್ಧ, ಕಥೆ ವಿಷಾದಾಂತವಾಗಬಾರದು. ಅದಕ್ಕಾಗಿ ಒಂದು ಪಾಠಾಂತರ

'ಮದುವೆ ಗೊದಗಿದ ಮಗಳ ಗಾಣಕೆ। ಮದವಣಿಗ

ಮೀನೊಂದ ಹಿಡಿಯಲು। ಗದೆಯಗಟ್ಟಣೆಗೆಣೆಯ ವಾದ್ಯದ

ಹುಳವ ತಂದಿರಿಸಿ।। ಕದಿಯಲದನ್ನೈತಂದ ನಿಂಗನಿ।

ಗುದುವಹನ ಗೈದರುಗಡಾರ್ಯರು।

ಆರನೆ ಸಾಲು ಬರೆಯಬೇಕು. ಅದಕ್ಕೊಂದು ಪ್ರಾಸ ಹುಡುಕಬೇಕು. ಪುರುಷ ಸರಸ್ವತಿಗೆ ಇದೇನು ಮಹಾ! ಇಲ್ಲಿ ನೋಡಿ

'ಬಿದಿಗೆ ಲಗ್ನದೊಳೆಂಬೆನ್ನೈ ಸುಪ್ರಾಸರಕ್ಷಣೆಗೆ' ಚೌತಿಯೋ, ದಶಮಿಯೋ ಆಗಬಹುದಿತ್ತು. ಆದರೆ ಪ್ರಾಸ ಕೂಡುವುದಿಲ್ಲವಲ್ಲ!

ಈಗ ಮಿನಿಗವನಗಳಲ್ಲೂ ಈ ಪ್ರಾಸದ ಜರೂರತ್ತು, ನಮಗೆ ಲತ್ತೆ ಕೊಡುತ್ತಿಲ್ಲವೇ? ಆದಿಯೋ, ಅಂತ್ಯವೋ ಅಂತೂ ಒಂದು ಪ್ರಾಸ. ಪುರುಷ ಸರಸ್ವತಿ ಬರೆದ 'ಬೈರಿಗೇಂದ್ರ ಭಯಾನಕ' 'ಸಂದೇಹ ಸಂದೋಹ ಸಂದೇಶ' ಗಳನ್ನು ಓದಿಯೇ ಸುಖಿಸಬೇಕು.

ಇಲ್ಲಿ ಒಂದು ಅಂಶವನ್ನು ನಾವು ಗಮನಿಸಬೇಕು. ನಡುಗನ್ನಡದ ಕಾಲದಿಂದ ಈಚಿನ ವರೆಗೂ ಭಾಮಿನೀ ಷಟ್ಪದಿ ಕನ್ನಡದ ಅತ್ಯಂತ ಜನಪ್ರಿಯ ಛಂದಸ್ಸು. ಆದರೆ 'ಭಾಮಿನಿ'ಯನ್ನು ಆಳುವುದು ನೂರರಲ್ಲಿ ತೊಂಬತ್ತೊಂಬತ್ತು ಜನರಿಗೆ ಆಗಲಿಲ್ಲ. ರಾಜರತ್ನಂ ಚೊಕ್ಕವಾಗಿ ಆ ಕೆಲಸ ಮಾಡಿದರು.

ಪುರುಷ ಸರಸ್ವತಿಯ ಕಾವ್ಯಗಳನ್ನು ಸಂಪಾದಿಸಿದವರು ಐದು ಜನ. ಅದರ ಕತೆಯೇ ರಮ್ಯ, ರೋಚಕ. ಅವರು ಯಾರು ಎಂಬ ಬಗ್ಗೆ ಸಂದೇಹವಿದೆ. 'ರಾಜರತ್ನಂ ಜೀಪಿ ಎಂಬೆಂ। ಗೇಜಿನವರು' ಈ ಕೆಲಸವನ್ನು ಮಾಡಿದೆವು ಎಂದು ಹೇಳಿಕೊಂಡದ್ದನ್ನು ಸಂಪಾದಕ ಪಂಚಕರು ಉಗ್ರವಾಗಿ ವಿರೋಧಿಸುತ್ತಾರೆ. ಓಲ್ಡ್ ಪುರುಷ ಸರಸತಿ ಬರೆದ ವರ್ಕ್ಸುಗಳ॥

ಫ್ಯಾನ್ಮೆಯಿಲ ನೆರೆ ನೋಡಿ ಆಥರ್

ನಾನೆ ಬರೆದವನೆಲ್ಲ ಜೋಕಿಗ

ನಾನಿ ಮಸ್ಸಾಗೆನಲು ವೆರಿ ಬ್ಯಾಡ್, ಡರ್ಟಿಷೇಂಪುಲಲಾ!

ನಿಂಗ ನಿರ್ಯಾಣ ಓದಿದ್ದಕ್ಕೆ ಫಲಶ್ರುತಿಯೂ ಬಹು ರಮ್ಯ

ಮೇಣೆದರೊಂದಕ್ಕರಮಾಂ। ಕಾಣಿಸಿದವರಾ ಮೃಕಂಡು ಪುತ್ರನ ತೆರದಿಂ॥

ಕೋಣನ ನೇರಿದನಂಗೆ? ಲ್ದೇಣಿಯಬೇಡದೆ ದಿವಕ್ಕೆ ನೆಗೆದೇಳುವರ್ಕೈ.

ಸಂಪಾದಕ ಪಂಚಕರೂ ತುಂಬಾವಿನೀತರು

'ಸೊರಗದಾ ಹೈಟೆತ್ತ ಪರ್ಗೇ

ಟರಿಯನಾಳವದೆತ್ತ?'

'ಜೋಗಿನ ರೋರರಿನ ಸರಿಸದಲಿ

ನಲ್ಲಿಯ ನೀರು ಸುರಿದಂತೈಸೆ'!

ನಮ್ಮ ಇಂದಿನ ನಗೆಗಾರರು ರಾಜರತ್ನಂ ಅವರ ಕೃತಿಗಳ ಅಭ್ಯಾಸ ಮಾಡುವುದು ತುಂಬಾ ಅಗತ್ಯ.

ರಾಜರತ್ನಂ ಹೇಳುತ್ತಿದ್ದ ಪಾಠ, ಅವರ ಭಾಷಣದ ವೈಖರಿ, ಅವರು ಮಾಡಿದ ಸಾಹಿತ್ಯ ಪರಿಚಾರಿಕೆ ಇವುಗಳನ್ನು ಕುರಿತೇ ಒಂದೊಂದು ಪುಸ್ತಿಕೆಯನ್ನು ತಿಳಿದವರು ಬರೆಯಬೇಕು.

ರನ್ನನನ್ನು ಕುರಿತು ರಾಜರತ್ನಂ ಅವರು ಮತ್ತೆ ಮತ್ತೆ ಹೇಳುತ್ತಿದ್ದರು. ಕಾವ್ಯ ರಚನೆಯನ್ನು ಬಿಡೋಣ. ರನ್ನ ಸಾಧಿಸಿದ ಒಂದು ಮಹತ್ತಾದ ಕಾರ್ಯವನ್ನು ಅವನೇ ಹೇಳಿಕೊಂಡಿದ್ದಾನೆ

ಬೆಳುಗಲಿಯ್ಯೆನೂರ ರೊಳ

ಗ್ಗಳ ಮೆನಿಸುವ ಜಂಬುಖಂಡಿ ಯೆಳ್ಪತ್ತರ್ಕಂ

ತಿಳಕಮೆನೆನೆಗಳ್ದ ಮುದು

ವೊಳಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ

ರನ್ನನಂತೆ ನೀವೂ ಆಗಬೇಕು ಎಂದವರು ತುಂಬು ಹೃದಯದಿಂದ ಹೇಳುತ್ತಿದ್ದರು.

ಸಂಪಾದಕ ಪಂಚಕರು ಪುರುಷ ಸರಸ್ವತಿಯನ್ನು ಹೊಗಳಿದ ಒಂದು ಮಾತನ್ನು ಉದಾಹರಿಸುವುದು ಅಗತ್ಯ.

ರನ್ನನಂತೆ ರಾಜರತ್ನಂ ಅವರೂ ಒಂದು ಅನರ್ಘ್ಯ ರತ್ನ, ತಮ್ಮ ವಂಶದ, ತಂದೆ ತಾಯಿಗಳ, ಕನ್ನಡ ನಾಡು ನುಡಿಗಳ ಸುಪುತ್ರರಾದರು.

'ಪಾರ್ಟಿಡೆಡ್, ನಿಜ; ಆದರಾ ಗ್ರೇಟ್ ಆರ್ಟು ಡೆಡ್ಡೇ!'

## ಮಗು

ಎಪ್ಪತ್ತು ವರ್ಷದ ಮುದುಕ
ಅಪ್ಪನಾದನಂತೆ
ವಿಚಿತ್ರ! ಆದರೂ ನಿಜ
ಮುದ್ದು ಮುದ್ದಾದ
ಗಂಡು ಮಗು
ಹೆಸರು - ವಯಾಗ್ರಜ!

– ಎಚ್. ಡುಂಡಿರಾಜ್





ಹೋಗಲೀ ಬಿಡು ಅಪ್ಪಾ, ಮೇಷ್ಟ್ರು ಕೇಳಿದರೆ
- "ಅಪ್ಪಾ ಲೆಕ್ಕಮಾಡಿ ಕೊಡಲಿಲ್ಲ, ಅಮ್ಮಾ ಮಾಡಿದಳು"
ಅಂತ ಹೇಳಿಬಿಡುತ್ತೇನೆ.



ಇದೇನೋ ಅವತಾರ!
ರಜಾಕ್ಕೆ ಬರೆದುಕೊಂಡಿದ್ದೇನೆ,
ನಾಳೆ ಸಾಹೇಬ್ರನ್ನ ನೋಡಬೇಕು ಕಣೋ

# ಪ್ರೇತ ಡಾಟ್ ಕಾಮ್

– ಶಿವು

## ಒಂದು ಸೆಮಿನಾರ್

''ನಾನೂ ಮತ್ತು ನನ್ನ ಸಂಗಡಿಗರೂ ಕಳೆದ ಆರು ತಿಂಗಳುಗಳಿಂದ ಶ್ರಮಿಸಿ ರೂಪಿಸಿದ ಸಾಫ್ಟ್‌ವೇರ್ ಈ ಪಾರೀ-ಮಾರ್ಕ್-1. ಇದರಿಂದ ಉಪಗ್ರಹಗಳ ಸಹಾಯವಿಲ್ಲದೇ ಇಂಟರ್ನೆಟ್ ಸಂಪರ್ಕ ಪಡೆಯಬಹುದು. ಇದರ ಬಳಕೆಯಿಂದ ಮಾಹಿತಿ ಸಾಗಣೆಯ ವೇಗ ಸಹಾ ಇಂದಿಗಿಂತ ಇಪ್ಪತ್ತುಪಟ್ಟು ಹೆಚ್ಚುತ್ತದೆ....''

''ಒಂದ್ನಿಮಿಷ ಮೇಡಂ, ಉಪಗ್ರಹಗಳ ಸಹಾಯವಿಲ್ಲದೇ ಇಂಟರ್ನೆಟ್ ಸಂಪರ್ಕ ಅಸಾಧ್ಯ ಅಂತ ನನ್ನ ಭಾವನೆ. ನಿಮ್ಮ ಈ ಹೊಸ ಸಾಫ್ಟ್‌ವೇರ್ ಯಾವ ಸಿದ್ಧಾಂತದ ಮೇಲೆ ನಿಂತಿದೆ ಎಂಬುದರ ಬಗ್ಗೆ ಸ್ವಲ್ಪ ಬೆಳಕು ಚೆಲ್ತೀರಾ?''

ಸೆಮಿನಾರ್ ಸ್ಪೀಕರ್ ಪಾರೀಗೆ (ಉರುಫ್ ಪಾರ್ವತಿ. ಎಸ್. ದೇಶ್ಪಾಂಡೆ) ಈ ಬೆಳಕು ಚೆಲ್ಲೋ ಧಂಧೆ ಹೊಸದೇನೂ ಆಗಿರಲಿಲ್ಲ. ಮೌಂಟ್ ಕಾರ್ಮೆಲ್ ಕಾಲೇಜಿನ ಫೆಸ್ಟ್ ಒಂದರಲ್ಲಿ ಅವಳು ಮಿಸ್ ಮೌಂಟ್ಸ್ ಆದಾಗಿನಿಂದ ಎಂ.ಜಿ. ರಸ್ತೆಯ ಬಡಪಾಯಿ ರೋಮಿಯೋಗಳ ಮೇಲೆ ಬೆಳಕು ಚೆಲ್ಲೀ, ಚೆಲ್ಲೀ, ಅವರಿಗೆಲ್ಲಾ ಸನ್ ಬರ್ನ್ ಆಗಿತ್ತೆಂಬ ಪ್ರತೀತಿ ಆ ದಿನಗಳಲ್ಲಿ ಪ್ರಚಲಿತವಾಗಿತ್ತು. ಈಗ ಪಾರೀ ಬ್ರಿಲಿಯಂಟ್ ಸಾಫ್ಟ್‌ವೇರ್ ಇಂಜಿನಿಯರ್. ಹೆಸರಾಂತ್ ಸಾಫ್ಟ್ವೇರ್ ಸಂಸ್ಥೆ ಇನ್ಫೋಬ್ರದರ್ಸ್‌ನ ಕಣ್ಮಣಿ ಅಥವಾ ಬ್ಲೂ ಐಡ್ ಗರ್ಲ್. ಅವಳ ಸಂಶೋಧನೆಗಳಿಂದ ಸಂಸ್ಥೆಗೆ ಕೋಟ್ಯಾಂತರ ಡಾಲರ್ ಲಾಭ ಅಂದಮೇಲೆ ಕೇಳಬೇಕೇ. ಸಂಸ್ಥೆಯ ಚರ್ಚಾಗೃಹದಲ್ಲಿ ಇಂದಿನ ಸೆಮಿನಾರ್ ಅವಳ ಟೀಮ್‌ನ ಹೊಸ ಸಂಶೋಧನೆ ಕುರಿತದ್ದು.

' ಓಹೋ, ಅಗತ್ಯವಾಗಿ. ಇತ್ತೀಚಿನ ಸಂಶೋಧನೆಗಳ ಪ್ರಕಾರ ವಾಯುಮಂಡಲದ ಅತಿ ಎತ್ತರದಲ್ಲಿ ಇಥೀರಿಯಲ್ ಶಕ್ತಿಗಳು ಬೆಳಕಿನ ವೇಗವನ್ನು ಮೀರಿ ಹಾರಾಡುತ್ತಿರುವುದು ಕಂಡುಬಂದಿದೆ. ನಾವು ರೂಪಿಸಿರುವ ಸಾಫ್ಟ್‌ವೇರ್ ಇಂತಹ ಶಕ್ತಿಗಳನ್ನು ಸೆರೆಹಿಡಿದು ಅವುಗಳ ನೆರವಿನಿಂದ ಇಂಟರ್ನೆಟ್ ಸಂಪರ್ಕ ಏರ್ಪಡಿಸುವುದರಿಂದ ಉಪಗ್ರಹದ ಅಗತ್ಯದ ಪ್ರಶ್ನೆಯೇ ಉದ್ಭವಿಸದು'' ಹಾರಾಡುತ್ತಿದ್ದ ಮುಂಗುರುಳನ್ನು ಬದಿಗೆ ಸರಿಸುತ್ತಾ ಆತ್ಮ ವಿಶ್ವಾಸದ ಮೆಲುನಗೆಯೊಂದಿಗೆ ಪಾರೀ ಉತ್ತರಿಸುತ್ತಿದ್ದಾಗ, ಅವಳ ಬಾಸ್

ಸುಧನ್ವನ ಎದೆ ತುಂಬಿಬಂತು. ಈಚೀಚೆಗೆ ಸುಧನ್ವನಿಗೆ irritating frequency ಯಲ್ಲಿ ಎದೆ ತುಂಬಿಬರಲು ಪ್ರಾರಂಭವಾಗಿತ್ತು. ಪಾರೀ ಮೆಲುನಗೆ ನಗುವ ಶೈಲಿ, ಜೋರಾಗಿ ನಗುವಾಗ ತನ್ನ ಅಂಗೈಯನ್ನು ತುಟಿಗಳ ಮುಂದೆ ತರುತ್ತಿದ್ದ ಮನಮೋಹಕ ರೀತಿ, ಒಟ್ಟಿನಲ್ಲಿ ಪಾರಿಯ ಸನ್ನಿಧಿಯೇ ಅವನ ಎದೆಗೆ ಟ್ರಿಗರಿಂಗ್ ಎಲಿಮೆಂಟಾಗಿತ್ತು. ಪಾಪ, ಮುಗ್ಧ ಪಾರಿಗೆ ಸುಧನ್ವನ ಈ ಕಾರ್ಡಿಯಾಕ್ ಇನ್ಸ್ಟಾಲ್ಮೆಂಟಿನ ಪರಿವೆಯೇ ಇರಲಿಲ್ಲ.

## ಒಂದು ಸಂಭಾಷಣೆ



ಆಷಾಢ ಬಹುಳ ಅಮಾವಸ್ಯೆಯ ನಿಶಿರಾತ್ರಿ. ಊರಾಚೆಯ ಹುಣಸೇ ತೋಪಿನಲ್ಲಿ ಒಂದು ಎಮರ್ಜೆನ್ಸಿ ಸಭೆ ನಡೆದಿತ್ತು. ಶಾಕಿನಿ, ಡಾಕಿನಿ, ಜಡೆಮುನಿಯೇ ಮುಂತಾಗಿ ಪೇತ್ರಲೋಕದ ಅನೇಕ ನಾಯಕರು ಚಿಂತಾಕ್ರಾಂತರಾಗಿ ಚರ್ಚೆ ನಡೆಸಿದ್ದರು. ''ಹೊಟ್ಟೆನೇ ಇಲ್ದಿದ್ರೆ ಹೊಟ್ಟೆ ನೋವು ಬರಲ್ಲ ಅಂದ್ಕೊಂಡಿದ್ದೆ, ಆದ್ರೂ ನೋಡಿ ಒಂದು ವಾರದಿಂದ ಕಾಡ್ತಾ ಇದೆ ಈ ಸುಡುಗಾಡು ನೋವು, ಕಾರಣಾನೇ ತಿಳೀತಿಲ್ಲ ಜಡೆಮುನಿ ಅವರೇ''

''ಸುಡುಗಾಡಿನಲ್ಲೇ ಕೂತಿರುವಾಗ ಬೇರೇ ಯಾವ ರೀತಿ ನೋವು ಸಾಧ್ಯಾ ಹೇಳಿ ಶಾಕಿನಿ. ತಮಾಷೆ ಹಾಗಿರ್ಲಿ. ನಿಮ್ಮ ಮನಸ್ಸಿನ ಆಕ್ರೋಶ, ಆತಂಕ ನನಗೆ ತಿಳಿದಿದೆ. ನಮ್ಮ ಈ ಪ್ರೇತ ಸಂಕುಲಕ್ಕೆ ಈಗ ಸನ್ನಿಹಿತವಾಗಿರುವ ಅಪಾಯಾನ ನೆನೆಸಿಕೊಂಡರೆ ಯಾರಿಗಾದರೂ ನಡುಕಹುಟ್ಟುವುದು ಸಹಜ. ಇದಕ್ಕೇನು ಪರಿಹಾರಾ?'' ಜಡೆಮುನಿಯ ಈ ಪ್ರಶ್ನೆ ನಿರ್ದಿಷ್ಟವಾಗಿ ಯಾರೊಬ್ಬರನ್ನು ಕುರಿತದ್ದಾಗಿರಲಿಲ್ಲ. ಆದರೂ ಡಾಕಿನಿ ಎದ್ದು ನಿಂತು,

''ನಮ್ಮನ್ನೆಲ್ಲಾ ಸಾರಾಸಗಟಾಗಿ ಎಥೀರಿಯಲ್ ಶಕ್ತಿಗಳು ಅಂತ ನಾಮಕರಣ ಮಾಡಿ, ದಿಗ್ಬಂದನ ಹಾಕಿ, ಯಾರ್ಯಾರದ್ದೋ ಈ ಮೇಯ್ಲ್ ಸಾಗಣೇಗೆ ನಮ್ಮನ್ನ ಬಳಸಿಕೊಳ್ಳೋ ಸನ್ನಾಹಾನ ನಾವು ಮೊಳಕೆಯಲ್ಲೇ ಚಿವುಟದಿದ್ದರೆ ನಮಗೆ ಉಳಿಗಾಲವಿಲ್ಲ. ಸ್ನೇಹಿತರೇ, ಇಂಟರ್ನೆಟ್ ಅಂದ್ರೆ ಅದೊಂದು ಥರಾ ಬಲೆ. ನೀವು ಈಥರ್ ನಲ್ಲಿ ಆರಾಮ್ವಾಗಿ ಹಾರಾಡ್ತಾ ಇದ್ರೆ ಅದು ನಿಮ್ಮನ್ನ ಫಕ್ಕಂತ ಹಿಡಿದ್ಬಿಟ್ಟು ಯಾವ್ಯಾವ್ದೋ ಕಂಪ್ಯೂಟರ್ ಪರದೇ ಮೇಲೆ ಪ್ರದರ್ಶಿಸಿಬಿಡುತ್ತಂತೆ ಇದಕ್ಕೆಲ್ಲಾ ಆ ರಾಕ್ಷಸ ಬಿಲ್ ಗೇಟ್ಸೇ ಕಾರಣ ಅಂತ ಅನ್ಸುತ್ತೆ ನನಗೆ'' ಅಂದಳು.

''ಡಾಕಿನಿ ಹೇಳಿದ್ದು ಜನರಲ್ ಆಗಿ ನಿಜಾ ಆದ್ರೂ, ನಮ್ಮ ಈಗಿನ ಸಮಸ್ಯೆಗೆ ನಿರ್ದಿಷ್ಟ ಕಾರಣ ಭೂಲೋಕದ ಪಾರೀ ಅನ್ನೋ ತರುಣಿ. ಅವಳು ನಿರ್ಮಿಸಿರೋ

ಸಾಫ್ಟ್‌ವೇರೇ ನಮಗೆಲ್ಲಾ ದಿಗ್ಬಂದನ ಹಾಕ್ತಿರೋದು. ನನ್ನ ಕೇಳಿದ್ರೆ ಈಗಲೇ ನಮ್ಮ ಡ್ರಾಕ್ಯುಲಾನ ಅವಳ ಬಳಿ ಕಳಿಸಿ, ಅವಳ ರಕ್ತಾ ಹೀರಿಸಿ, ಅವಳ್ನ ಇಲ್ಲೀಗೆ ಕರೆಸಿಕೊಂಡುಬಿಟ್ರೆ ನಮ್ಮ ಸಮಸ್ಯೆ ಪರಿಹಾರ ಆದಹಾಗೇನೇ''

ಮೋಹಿನಿಯ ಈ ಸೂಚನೆ ಜಡೆಮುನಿಗೆ ಹಿಡಿಸಿದ ಹಾಗೆ ಕಾಣಲಿಲ್ಲ.

''ಪಾರೀನ ಇಲ್ಲಿಗೆ ತಂದ್ರೆ ಸಾಫ್ಟ್‌ವೇರ್ ಬಳಕೆ ತಪ್ಪುತ್ತೇ? ನಾವು ಹುಡುಕೋ ಪರಿಹಾರ ಇನ್ನೂ ಸಟಲ್ ಆಗಿರಬೇಕು. ಅವಳ ರಕ್ತಾ ಹೀರಿಸೋಬದಲು, ಅವಳನ್ನೇ ಇಲ್ಲಿಗೆ ಹೈಜಾಕ್ ಮಾಡಿ ತಂದರೆ, ಅವಳ ಬಿಡುಗಡೆಯನ್ನು ನೆಗೋಷಿಯೇಟ್ ಮಾಡಿ ನಮ್ಮ ಗುರಿ ಸಾಧಿಸ್ಕೋಬಹುದು ಅನ್ಸುತ್ತೆ'' ಜಡೆಮುನಿಯ ಈ ಸಲಹೆ ಎಲ್ಲರ ಅನುಮೋದನೆ ಪಡೆಯಿತು.

## ಒಂದು ಹೈಜಾಕ್

ದಿನವೆಲ್ಲಾ ಹೈ ಸ್ಪೆಸ್ ಪರಿಸರದಲ್ಲಿ ದುಡಿಯುತ್ತಿದ್ದ ಪಾರೀಗೆ ಸಂಜೆಯಾಯಿತೆಂದರೆ ಚರ್ಚ್ ರಸ್ತೆಯ ನಾಸಾ ಪಬ್ ಸೇರಿ ಡ್ರಾಫ್ಟ್ ಬೀರು ಹೀರುವುದು ದಿನನಿತ್ಯದ ಪರಿಪಾಠವಾಗಿತ್ತು. ಬೆಳಗ್ಗೆ ಆರುಘಂಟೆಗೆ ಒಂದು ತಾಸು ಏರೋಬಿಕ್ಸ್ ಅನ್ನೂ ಸಹಾ ಇದೇ ನಿಷ್ಠೆಯಿಂದ ಪಾಲಿಸುತ್ತಿದ್ದುದರಿಂದ ಪಾರಿಯ ಟೀನ್ ಏಜ್ ಲುಕ್ ಒಂದು ರೀತಿಯ ಕ್ರಿಯಾತ್ಮಕ ಸಮತೋಲನ (Dynamic Equilibrium) ನಲ್ಲಿತ್ತೆಂದು ಹೇಳಬಹುದು. ಸೆಮಿನಾರ್ ಮುಗಿದ ಸಂಜೆ ಪಾರೀ ಸಹಜವಾಗಿಯೇ ತನ್ನ ಯಶಸ್ಸನ್ನು ಮೆಲಕು ಹಾಕುತ್ತಾ ತನ್ನ ಎಂದಿನ ವಾಟರಿಂಗ್ ಹೋಲ್‌ನಲ್ಲಿ ಕುಳಿತು ದರ್ಬಾರ್ ನಡೆಸಿದ್ದಳು. ಸುತ್ತಲಿನ ಗೆಳೆಯ ಗೆಳತಿಯರ ಕಲರವ ಕಿವಿಗೆ ಇಂಪಾಗಿದ್ದರೂ ಪಾರಿಯ ಮನಸ್ಸು ಯಾವುದೋ ಸೈಬರ್ ಪ್ರಪಂಚದಲ್ಲಿ ವಿಹರಿಸುತ್ತಿತ್ತು. ಅವರು ಕುಳಿತಿದ್ದ ಮೇಜಿನ ಮೇಲೆ ಒಂದು ಪಿಚ್ಚರ್, ಆರೇಳು ಗ್ಲಾಸುಗಳು, ಪೀನಟ್ ಮಸಾಲಾ ತಟ್ಟೆ ಇವುಗಳು ಹರಡಿದ್ದ ಕಲಾತ್ಮಕ ರೀತಿ ಖ್ಯಾತ ಯೂರೋಪಿಯನ್ ಚಿತ್ರಕಾರರ ಸ್ಟಿಲ್ ಲೈಫ್ ಅನ್ನು ನೆನಪಿಗೆ ತರುವಂತಿದ್ದವು. ರಾತ್ರಿ ಹನ್ನೊಂದು ಘಂಟೆಗೆ ಸಂತೋಷ ಕೂಟ ಮುಗಿದು ಪಾರಿ ತನ್ನ ಜೆನ್ ಹತ್ತಿರ ಹೋಗಿ ಅದರ ಬಾಗಿಲು ತೆರೆಯಲು ಯತ್ನಿಸಿದಾಗ ಅವಳಿಗೆ ತಾನು ಹೀರಿದ ಬೀರಿನ ಪರಿಣಾಮದ ಅರಿವಾಯಿತು. ಎಲ್ಲಲ್ಲೋ ಓಡುತ್ತಿದ್ದ ಕಾರಿನ ಕೀಲಿಯನ್ನು ಮಹತ್ಪ್ರಯಾಸದಿಂದ ಬಾಗಿಲಿಗೆ ಅಳವಡಿಸಿ, ಒಳಗೆ ಕುಳಿತು, ಕಾರನ್ನು ಸ್ಟಾರ್ಟ್ ಮಾಡಿದಳು, ಕೆನೆಯುವ ಕುದುರೆಯಂತೆ ಕಾರು ಒಮ್ಮೆ ನೆಗೆದು ಅನಂತರ ಶರವೇಗದಲ್ಲಿ ಓಡಲು ಪ್ರಾರಂಭಿಸಿದಾಗ ಪಾರಿಯ ಸಂತಸದ ಬಟ್ಟಲು ಉಕ್ಕಿ ಹರಿದಿತ್ತೆಂದು ಧಾರಾಳವಾಗಿ ಹೇಳಬಹುದಾಗಿತ್ತು.

ಎಂಪ್ಸರ್ ಮ್ಯಾನರ್ ಸೇತುವೆಯ ಕೆಳಗೆ ಬರುವಾಗ ಪಾರಿ ಅರುವತ್ತು ಕಿಲೋಮಿಟರ್ ವೇಗದಲ್ಲಿ ಓಡುತ್ತಿದ್ದ ಕಾರನ್ನು ಹಠಾತ್ತನೆ ಬ್ರೇಕ್ ಒತ್ತಿ ನಿಲ್ಲಿಸಬೇಕಾದ ಪ್ರಮೇಯ ಒದಗಿ ಬಂತು. ರಸ್ತೆಯ ಮಧ್ಯೆ ''ರಸ್ತೆ ರಿಪೇರಿಯಲ್ಲಿದೆ. ಡಿಟೂರ್ ದಾರಿ ಹಿಡಿಯಿರಿ'' ಎಂಬ ಕೆಂಪು ಅಕ್ಷರಗಳ ಫಲಕ ರಾರಾಜಿಸುತ್ತಿತ್ತು. ಸೇತುವೆ ಕೆಳಗಿನ ರಸ್ತೆ ಬಂದ್ ಮಾಡಿ ಎರಡು ಪಕ್ಕಗಳಲ್ಲೂ ದೈತ್ಯಾಕಾರದ ಕಲ್ಲು ಗೋಡೆಗಳಿರುವಾಗ ಡಿಟೂರ್ ಬಳಸಿ ಅಂತಾರಲ್ಲಾ ಅಂತ ಪಾರೀಗೆ ನಗು. ಮಧ್ಯರಾತ್ರಿ, ನಿರ್ಜನ ಪ್ರದೇಶ, ನಿಂತ ಕಾರು, ದಾರಿ ಬಂದ್, ಇವೆಲ್ಲಾ ಸಾಮಾನ್ಯವಾಗಿ ಭಯ, ಆತಂಕ ತರುವ ವಿಷಯಗಳಾಗಿದ್ದರೂ, ಕಿಂಗ್ ಫಿಷರ್ ಮನಃಸ್ಥಿತಿಯಲ್ಲಿದ್ದ ಪಾರರಿಗೆ ಇವೆಲ್ಲಾ ಬಹು ಮೋಜಿನ ಸಂಗತಿ ಅನ್ನಿಸಿತ್ತು. ಒಮ್ಮೆಲೇ ಪಾರಿಯ ಕಾರು ನೆಲದಿಂದ ಮೇಲೆದ್ದು ಹೆಲಿಕಾಪ್ಟರಿನಂತೆ ಆಕಾಶದಲ್ಲಿ ಹಾರಲು ಪ್ರಾರಂಭಿಸಿದ್ದ ಪಾರಿಯ ಗಮನಕ್ಕೆ ಬರುವ ವೇಳೆಗೆ ಕಾರು ಹುಣಸೇ ತೋಪು ಸೇರಿತ್ತು. ಪಾರಿ ಕಾರಿನಿಂದ ಇಳಿಯುತ್ತಿದ್ದಂತೆ ಸುತ್ತ ನೆರೆದಿದ್ದ ಪ್ರೇತಸಂಕುಲದ ''ಪ್ರೇತ ಮುಕ್ತಿ ಮೋರ್ಛಕ್ಕೆ ಜಯವಾಗಲಿ'' ''ಡೌನ್ ಡೌನ್ ಪಾರೀ'' ''ತೋರುವೆವು ನಾವು, ನಮ್ಮ ಎಥೀರಿಯಲ್ ಶಕ್ತಿ'' ಎಂಬ ಘೋಷಣೆಗಳು ಗಾಡಾಂಧಕಾರವನ್ನು ತುಂಬಿತ್ತು.

ಕಾರಿನಿಂದಿಳಿದ ಪಾರಿಯನ್ನು ಮೊದಲು ಎದುರುಗೊಂಡಿದ್ದು ಸಂಕುಲದ ನಾಯಕ ಜಡೆಮುನಿ. ಯಾವುದೋ ಖಳನಾಯಕಿ ಎಂದುಕೊಂಡಿದ್ದ ಜಡೆಮುನಿಗೆ ಪಾರಿಯ ಮುಗ್ಧ ಸೌಂದರ್ಯವನ್ನು ಕಂಡು ಇಲ್ಲದ ಉಸಿರು ಸಿಕ್ಕಿಕೊಂಡಂತಾಯಿತು. ಆದರೂ ಸಾವರಿಸಿಕೊಂಡು ''ಹೀಗೆ ಬಾಮ್ಮ, ಈಗ ನೀನು ನಮ್ಮ ಸೆರೆಯಾಳು. ನಿನ್ನ ಬಿಡುಗಡೆ ನಿಮ್ಮ ಸಂಸ್ಥೆಯ ಕೈಯಲ್ಲಿದೆ'' ಎನ್ನುತ್ತಾ ಪಾರಿಯನ್ನು ಹತ್ತಿರದಲ್ಲಿದ್ದ ಪಾಳುಬಿದ್ದ ಮನೆಯೊಂದಕ್ಕೆ ಕರೆದೊಯ್ದ. ಅಲ್ಲೊಂದು ಪ್ರೇತಸಂಸಾರ ನೆಲೆಸಿತ್ತು. ಅಲ್ಲಿನ ಪುಟ್ಟ ಪ್ರೇತವೊಂದು ಪಾರಿಯ ಪಾದಗಳನ್ನೇ ದೃಷ್ಟಿಸಿ ನೋಡುತ್ತಾ'' ಮುಂದು ಮುಂದು ಪಾದ'' ಅನ್ನುತ್ತಾ ಕಿಸಕ್ಕನೆ ನಕ್ಕಾಗ ಅದರಮ್ಮ ''ಹಾಗೆಲ್ಲಾ ನಗಬಾರದು'' ಅಂತ ಅದನ್ನ ಗದರಿಕೊಂಡಳು.

## ಒಂದು ಸಂದೇಶ

ಹತ್ತುಘಂಟೆಗೆ ಸರಿಯಾಗಿ ಆಫೀಸಿಗೆ ಹಾಜರಾಗುತ್ತಿದ್ದ ಶಿಸ್ತಿನ ಸಿಪಾಯಿ ಸುಧನ್ವನಿಗೆ, ಪ್ರತಿದಿನ ಹತ್ತುಘಂಟೆ ಏಳು ನಿಮಿಷಕ್ಕೆ, ಎದೆ ಢವಢವ ಗುಟ್ಟಲು ಪ್ರಾರಂಭಿಸುತ್ತಿತ್ತು. ಅದು ಪಾರಿ ಆಫೀಸನ್ನು ಪ್ರವೇಶಿಸುವ ಸಮಯ. ಪಾರಿ ಒಳಗೆ ಬಂದು ಸಹೊದ್ಯೋಗಿಗಳಿಗೆಲ್ಲಾ ಹಾಯ್ ಹೇಳಿ ತನ್ನ ಟರ್ಮಿನಲ್‌ನಲ್ಲಿ ಸೆಟಲ್

ಡೌನ್ ಆಗುವವರೆಗೂ ಸುಧನ್ವನ ಮನ ಭೃಂಗದಂತೆ ಪಾರಿಯ ಸುತ್ತ ಹಾರಾಡುತ್ತಾ ಅವಳ ಹಾವಭಾವಗಳನ್ನು ವೀಕ್ಷಿಸುತ್ತಾ ಆನಂದಿಸುತ್ತಿತ್ತು. ಆ ಬೆಳಗ್ಗೆ ಹತ್ತೂಕಾಲಾದರೂ ಪಾರಿ ಕಾಣದಾದಾಗ ಸುಧನ್ವ ಗಾಬರಿಯಾದ. ಅವಳ ಮನೆಗೆ ಫೋನ್ ಮಾಡಿದರೆ ಹೇಗೆ ಎಂಬ ಯೋಚನೆ ಒಮ್ಮೆ ಸುಳಿದು ಹೋಯಿತು. ಒಂದು ಘಂಟೆಯಾದರೂ ಕಾದು ಅನಂತರ ವಿಚಾರಿಸಿದರೆ ಒಳಿತು ಎಂದುಕೊಂಡು ಕಂಪ್ಯೂಟರ್ ಟರ್ಮಿನಲ್ ಕಡೆ ಗಮನ ಹರಿಸಿದ. ಸ್ಕ್ರೀನಿನ ಕೆಳಬಲತುದಿಯಲ್ಲಿ ''ನ್ಯೂ ಈ ಮೇಯ್ಲ್'' ಎಂಬ ಸಂದೇಶ ನಕ್ಷತ್ರದಂತೆ ಮಿನುಗುತ್ತಿತ್ತು.



ಸುಧನ್ವ ಇಂಟರ್ನೆಟ್ ತೆರೆದು ತನ್ನ ಅಂಚೆ ನೋಡಿದಾಗ, ಅದರಲ್ಲಿ ''ತ್ವರೆ ಮಾಡಿ, ತ್ವರೆಮಾಡಿ, ಪ್ರೇತ ಡಾಟ್‌ಕಾಮ್ ವೆಬ್ ಸೈಟ್ ಅನ್ನು ಸಂದರ್ಶಿಸಿ. ಒಂದು ಅತಿ ಮುಖ್ಯ ವಿಷಯ ನಿಮಗೆ ಕಾದಿದೆ'' ಎಂಬ ಪತ್ರವಿದೆ. ತಡಮಾಡದೇ ಸುಧನ್ವ ಆ ಸೈಟ್ ಪ್ರವೇಶಿಸಿದ. ಒಮ್ಮಲೇ ತೆರೆಯ ಮೇಲೆ ಅತಿ ವಿಕಾರವಾದ ಮುಖವೊಂದು ಮೂಡಿಬಂತು. ಕೆಂಗಣ್ಣುಗಳು, ಕಪ್ಪು ಗಡ್ಡ ಕೋರೆ ಹಲ್ಲುಗಳು, ಎಣ್ಣೆ ಕಾಣದ ಕೂದಲನ್ನು ಹೆಣೆದು ಕಟ್ಟಿದ್ದ ಹತ್ತು ಹನ್ನೆರಡು ಜಡೆಗಳು, ಒಟ್ಟಿನಲ್ಲಿ ಖಳನಾಯಕನ ಪಾತ್ರಕ್ಕೆ ಹೇಳಿ ಮಾಡಿಸಿದ ಮುಖ. ಸುಧನ್ವ ನೋಡುತ್ತಿದ್ದಂತೆ ಆ ಮುಖ ಮಾತನಾಡಲು ಪ್ರಾರಂಭಿಸಿತು, ''ಸುಧನ್ವ, ಈ ಸಂದೇಶ ನಿನಗಾಗಿಯೇ ವಿಶೇಷವಾಗಿ ರೂಪಿಸಿದ್ದು. ನಿನ್ನ ಪಾರಿ ಈಗ ನಮ್ಮ ಸೆರೆಯಾಳು. ನೀನು ನಮ್ಮ ಕಣ್ಣ ಮುಂದೆ ನಿಮ್ಮ ಸಂಸ್ಥೆ ನಿರ್ಮಿಸಿರುವ ಪಾರೀ ಮಾರ್ಕ್-1 ಸಾಫ್ಟ್‌ವೇರನ್ನು ಸಂಪೂರ್ಣವಾಗಿ ನಾಶಪಡಿಸಿದರೆ ಮಾತ್ರ ನಾವು ಪಾರಿಯ ಬಿಡುಗಡೆ ಬಗ್ಗೆ ಯೋಚಿಸಬಹುದು, ''ರಿಪ್ಲೈ'' ಗುಂಡಿಯನ್ನು ಒತ್ತಿ ನಿನ್ನ ಉತ್ತರ ತಿಳಿಸಬಹುದು. ಸುಧನ್ವ, ಈ ಸಂದೇಶ ನಿನಗಾಗಿಯೇ ವಿಶೇಷವಾಗಿ ರೂಪಿಸಿದ್ದು. ನಿನ್ನ ಪಾರಿ ಈಗ ನಮ್ಮ ಸೆರೆಯಾಳು. ನೀನು....'' ಸುಧನ್ವ ಕಂಪ್ಯೂಟರ್‌ನ ಆಫ್ ಮಾಡಿದ. ಆ ಜಡೆಮುನಿಯ ಗಿಣಿಪಾಠ ಅವನಿಗೆ ಬೇಕಿರಲಿಲ್ಲ. ಅವನು ಯೋಚಿಸಿ ನಿರ್ಧರಿಸಬೇಕಾದ ಸಂಗತಿಗಳು ನೂರಾರಿದ್ದವು.

## ಒಂದು ಕಠಿಣ ಸತ್ಯ

ಪಾಳು ಬಿದ್ದ ಭವನದ ಕೈಸಾಲೆಯಲ್ಲಿದ್ದ ಮೇಜಿನ ಈಕಡೆ ಸುಧನ್ವ ಕುಳಿತಿದ್ದ. ಆಚೆಬದಿಯಲ್ಲಿ ಜಡೆಮುನಿ ಗಡ್ಡ ನೀವಿಕೊಳ್ಳುತ್ತಾ ಆಸೀನನಾಗಿದ್ದ. ಮಾತುಕತೆ ಭರದಿಂದ ಸಾಗಿತ್ತು.

''ಕೋಟ್ಯಾಂತರ ಡಾಲರ್ ಲಾಭ ಗಳಿಸಬಹುದಾದ ಸಾಫ್ಟ್‌ವೇರ್ ಇದು. ಸಾರಾಸಗಟಾಗಿ ಇದನ್ನು ನಾಶಮಾಡಲು ಹೇಳ್ತೀರಲ್ಲಾ. ನಾವೇನು ಎಲ್ಲಾ ಪ್ರೇತಗಳನ್ನೂ ಒಂದೇ ಬಾರಿಗೆ ಬಳಸಿಕೊಳ್ಳೋಲ್ವಲ್ಲಾ. ಪಾರಿಯ ಬಿಡುಗಡೆಗೆ ಪ್ರತಿಯಾಗಿ ನಾವು ಇನ್ನೇನಾದ್ರೂ ಕೊಟ್ಟು ಸಮಸ್ಯೆ ಪರಿಹಾರ ಮಾಡುಕ್ಕಾಗುಲ್ವೇ'' ಸುಧನ್ವನ ಪ್ರಶ್ನೆಗೆ ಉತ್ತರವಾಗಿ ಜಡೆಮುನಿಯಿಂದ ಒಂದು ತಿರಸ್ಕಾರದ ನಗೆ ಹೊರಹೊಮ್ಮಿತು.

''ಸಾಧ್ಯವಿಲ್ಲ. ಪ್ರಕೃತಿನಿಯಮಗಳನ್ನ ಉಲ್ಲಂಘಿಸೋಕ್ಕೆ ಹೊರಟಿದ್ದೀಯ ನೀನು. ಆ ಸಾಫ್ಟ್‌ವೇರ್ ಸೀಡೀನ ಮೊದಲು ನಾಶಮಾಡಿ, ಅಂತಹ ಸಾಫ್ಟ್‌ವೇರ್‌ನ ಮುಂದೆ ಸೃಷ್ಟಿಸೋದಿಲ್ಲ ಅಂತ ನೀನು ಭಾಷೆ ಕೊಟ್ರೆ, ನಾನು ಪಾರೀನ ಬಿಡುಗಡೆ ಮಾಡೋದು. ಇಲ್ದಿದ್ರೆ ನಿಮ್ಮಿಬ್ಬರನ್ನೂ ನಮ್ಮ ಪ್ರಜೆಗಳನ್ನಾಗಿಸೊ ಒತ್ತಡಕ್ಕೆ ನಾನು ಮಣೀಬೇಕಾಗುತ್ತೆ. ಬೇಗ ನಿರ್ಧರಿಸು'' ಜಡೆಮುನಿ ತನ್ನ ಅಲ್ಟಿಮೇಟಂ ಕೊಟ್ಟು ಹಿಂದಕ್ಕೆ ಒರಗಿದ.

ಈ ಮಾತುಗಳನ್ನ ನಿರೀಕ್ಷಿಸಿಯೇ ಇದ್ದ ಸುಧನ್ವನ ಹಂಚಿಕೆಯೇ ಬೇರೆಯದಾಗಿತ್ತು. ಪಾರಿಯ ಹೈಜಾಕ್ ಆದಾಗಲೇ ಸಾಫ್ಟ್‌ವೇರ್‌ಗೆ ಆತ ತಿಲಾಂಜಲಿನ್ನಿತ್ತಿದ್ದ. ಈಗ ಸಾಫ್ಟ್‌ವೇರ್‌ಗೆ ಬದಲಾಗಿ ಪಾರಿಯ ಹೃದಯವನ್ನು ಗೆಲ್ಲಲು ಜಡೆಮುನಿಯ ಸಹಕಾರ ಕೋರುವುದು ಅವನ ಅಜೆಂಡಾದಲ್ಲಿತ್ತು. ಅವನ ಮಾತಿನ ವರಸೆ ಅದಕ್ಕೆ ತಕ್ಕಂತಿತ್ತು.

''ಜಡೆಮುನಿ ಸಾರ್, ಪಾಪ ಅರೀದ ಹುಡುಗಿ ಪಾರಿ ನನ್ನ ಅನ್ವೇಷಣೆಯ ಭರದಲ್ಲಿ ನಿಮ್ಮ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವಂತಹ ಕೆಲಸ ಮಾಡಿರಬಹುದು. ಅದರಿಂದ ಲಾಭ ಪಡೆಯುವುದು ತಪ್ಪು ಎಂದು ಈಗ ನನಗೆ ಮನವರಿಕೆಯಾಗಿದೆ. ಖಂಡಿತ ನಾನು ಈಗಲೇ ನಿಮ್ಮ ಕೋರಿಕೇನ ನಡೆಸಿಕೊಡುತ್ತೇನೆ. ಅದಕ್ಕೆ ಪ್ರತಿಯಾಗಿ ನಿಮ್ಮಿಂದ ನನಗೊಂದು ಸಣ್ಣ ಸಹಾಯ ಆಗಬೇಕಾಗಿದೆ. ನೀವು ಅಪ್ಪಣೆಕೊಟ್ಟರೆ ಅದನ್ನ ತಿಳಿಸುವೆ'' ಸುಧನ್ವನ ದನಿ ಅತಿ ವಿನಯದಿಂದ ಕೂಡಿತ್ತು.

''ಅದೇನದು ನಿನ್ನ ಕೋರಿಕೆ?''

''ಪಾರಿ ಅರೀದ ಹುಡುಗಿ ಎಂದು ಈಗಾಗಲೇ ಹೇಳಿದ್ದೆ. ಜೀವನ ಪರ್ಯಂತ ಅವಳಿಗೆ ಮಾರ್ಗದರ್ಶನ ಮಾಡುವ ಸುಯೋಗ ನನಗೆ ದೊರಕಿಸಿಕೊಡಬೇಕು. ಅವಳನ್ನು ನಾನು ನನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಸುತ್ತಿದ್ದೇನೆ. ಆದರೆ ಅವಳಿಗೆ ಅದರ ಪರಿವೆಯೇ ಇಲ್ಲ. ನನ್ನ ಮಾತನ್ನು ಅವಳು ಬಹಳ ಲಘುವಾಗಿ ಕಾಣುತ್ತಿದ್ದಾಳೆ. ಈ ನಿಟ್ಟಿನಲ್ಲಿ ನಿಮ್ಮ ಸಹಾಯ ಬೇಕು'' ಸುಧನ್ವ ತನ್ನ ಕೋರಿಕೆಯನ್ನ ಚಿಕ್ಕದಾಗಿ ಚೊಕ್ಕವಾಗಿ ತಿಳಿಸಿದ.

ಜನಡೆಮುನಿ ಸುಧನ್ವನ ಕೋರಿಕೆಯನ್ನ ಮನಸ್ಸಿನಲ್ಲೇ ಪರಿಶೀಲಿಸಿ,

''ಪಾರಿಯನ್ನ ನಮ್ಮ ಸೆರೆಯಿಂದ ನಿನ್ನ ಸೆರೆಗೆ ಒಪ್ಪಿಸಬೇಕೆಂದು ನಿನ್ನ ಅಪೇಕ್ಷೆ. ನೀನು ಅವಳನ್ನು ಪ್ರೀತಿಸುವುದು ನಿಜವಾದರೆ, ಆ ಸಂಗತಿಯನ್ನು ಅವಳಿಗೆ ಸಾಬೀತುಪಡಿಸುವ ಮಾರ್ಗ ಒಂದಿದೆ.....''

''ಅದೇನದು ಆ ಮಾರ್ಗ?''

''ಬಾ, ನೀನು ತಂದಿರುವ ಸೀಡಿಯನ್ನು ಮೊದಲು ನಾಶಮಾಡಿ ಅನಂತರ ಪಾರಿಯ ಬಳಿ ಹೋಗೋಣ. ದಾರಿಯಲ್ಲಿ ಆ ಮಾರ್ಗದ ಬಗ್ಗೆ ತಿಳಿಸುವೆ''

## ಒಂದು ಮೈಕ್ರೋಸ್ಕೋಪ್

ಸುಧನ್ವ ಮತ್ತು ಪಾರಿ ಮೇಜಿನ ಒಂದು ಬದಿ ಕುಳಿತಿದ್ದರು. ಜಡೆಮುನಿ ಮಾತನಾಡುತ್ತಿದ್ದ.

''ಕೋಟ್ಯಾಂತರ ಡಾಲರ್ ಲಾಭದ ಆಶೆ ತೊರೆದು ಸಾಫ್ಟ್‌ವೇರ್‌ನ ನಾಶಮಾಡಿ ಸುಧನ್ವ ನಿನ್ನ ಬಿಡುಗಡೆಗಾಗಿ ಇಲ್ಲಿಗೆ ಬಂದಿದ್ದಾನೆ. ಅವನು ನಿನ್ನನ್ನು ಬಹುವಾಗಿ ಪ್ರೀತಿಸುತ್ತಿರುವುದು ನಿನಗೆ ತಿಳಿದಿದೆಯೇ?''

''ಪ್ರೀತಿ! ಹ್ಹ ಹ್ಹ... we are just good friends ಅಷ್ಟೆ.''

''ನಮ್ಮ ಪ್ರೇತಸಂಕುಲದಲ್ಲಿ ಇಂತಹ ವಿಷಯಗಳನ್ನು ಖಚಿತವಾಗಿ ತಿಳಿಯಲು ಒಂದು ಉಪಕರಣ ಬಳಕೆಯಲ್ಲಿದೆ...''

''ಏನದು ಉಪಕರಣ?'' ಪಾರಿಯ ವೈಜ್ಞಾನಿಕ ಮನೋಭಾವ ಜಾಗೃತವಾಯಿತು.

''ಅದನ್ನ ನಾವು ಟ್ರೂತ್ ಮೈಕ್ರೋಸ್ಕೋಪ್ ಅಂತ ಕರೀತೇವೆ. ಒಂದು ರಕ್ತದ ಬಿಂದುವನ್ನ ಅದರ ಕೆಳಗಿಟ್ಟು ನೋಡಿದರೆ, ಪ್ರತಿಯೊಂದು ಕಣದ ಮೇಲೂ ಅದರ ಮಾಲಿಕ ನಿಜವಾಗಿ ಪ್ರೀತಿಸುತ್ತಿರುವವರ ಹೆಸರಿರುತ್ತದೆ...''

''ಅಂದರೇ, ಸುಧನ್ವನ ರಕ್ತದ ಕಣದ ಮೇಲೆ ನನ್ನ ಹೆಸರಿರುತ್ತೇ?''

''ಅವ ನಿನ್ನನ್ನು ಪ್ರೀತಿಸುವುದು ನಿಜವಾದರೆ ಖಂಡಿತವಾಗಿ ನೀನು ಅವನ ರಕ್ತದ ಕಣಗಳಲ್ಲಿ ನಿನ್ನ ಹೆಸರನ್ನು ನೋಡಬಹುದು...''

''ಓಹ್, ಹೌ ಕ್ಯೂಟ್! ಸುಧನ್ವ ಈ ಮಾತು ನಿಜಾ ಆದ್ರೆ ನಾನು ನಿನ್ನ ಬಾಳಸಂಗಾತಿಯಾಗಲು ನನ್ನ ಒಪ್ಪಿಗೆ ಇದೆ. ಜಡೆಮುನಿಯವರೇ, ನನಗೆ ನಿಮ್ಮ ಮೈಕ್ರೋಸ್ಕೋಪ್ ತೋರಿಸ್ತೀರಾ?''

ಸುಧನ್ವ ಬಹು ಉತ್ಸಾಹದಿಂದ, ಬೆರಳಿಗೆ ಸೂಜಿ ಚುಚ್ಚಿ ಒಂದು ಬಿಂದು ರಕ್ತ ತೆಗೆದು ಒಂದು ಸ್ಲೈಡಿಗೆ ಹಚ್ಚಿದ. ಜಡೆಮುನಿ ತಂದಿಟ್ಟಿದ್ದ ಸೂಕ್ಷ್ಮದರ್ಶಕದ ಕೆಳಗೆ ಆ ಸ್ಲೈಡನ್ನಿಟ್ಟು ಪಾರಿ ಬಹು ಕುತೂಹಲದಿಂದ ಅದರಲ್ಲಿ ಕಣ್ಣಿಟ್ಟು ನೋಡಿದಳು. ಮರುಕ್ಷಣ ಅವಳ ಕೆನ್ನೆ ಕೆಂಪಾಯಿತು. ಕೋಪದಿಂದ ಅವಳ ತುಟಿ ಅದುರಲು ಪ್ರಾರಂಭವಾಯಿತು. ಐ ಪೀಸ್ ನಿಂದ ಕಣ್ಣು ತೆಗೆದು ನೇರವಾಗಿ ಸುಧನ್ವನ ಬಳಿಗೆ ಬಂದು ''ಸುಳ್ಳು ಹೇಳುಕ್ಕೆ ನಾಚಿಕೆಯಾಗುಲ್ಲವೇ'' ಅಂತ ಛೀಮಾರಿ ಹಾಕಿ ಒಳಗೆ ಹೋದಳು. ಏನೂ ಅರ್ಥವಾಗದ ಸುಧನ್ವ ತಾನೂ ದರ್ಶಕದಲ್ಲಿ ಕಣ್ಣಿಟ್ಟು ನೋಡಿದ. ಅವನಿಗೆ ತನ್ನ ಕಣ್ಣುಗಳನ್ನು ತಾನೇ ನಂಬಲಾಗಲಿಲ್ಲ. ದರ್ಶಕದಲ್ಲಿನ ಪ್ರತಿಯೊಂದು ಕಣದ ಮೇಲೆ ''ಜುಬೇದಾ'' ಎಂದು ಬರೆದಿತ್ತು.

''ಯಾರಿದು ಜುಬೇದಾ?'' ಜಡೆಮುನಿಯ ಪ್ರಶ್ನೆ ಸಹಾನುಭೂತಿಯಿಂದ ಕೂಡಿತ್ತು.

''ಅವಳು ನನ್ನ ಪರ್ಸನಲ್ ಸೆಕ್ರೆಟರಿ ಆಗಿದ್ದಳು. ಒಮ್ಮೆ ಅವಳನ್ನು ನಾನು ಪ್ರೀತಿಸುತ್ತಿದ್ದದ್ದು ನಿಜ. ಆದರೆ ಈಗ ಅದೆಲ್ಲಾ ಹಳೆಯ ಕಥೆ. ಪಾರಿ ನನ್ನ ಹೃದಯವನ್ನು ಪ್ರವೇಶಿಸಿದ ಮೇಲೆ ನಾನು ಬೇರೆ ಯಾರಿಗೂ ಅಲ್ಲಿ ಜಾಗ ನೀಡಿಲ್ಲ. ನಿಮ್ಮ ದರ್ಶಕದ್ದೇ ಏನೋ ತಪ್ಪಿರಬೇಕು...'' ಸುಧನ್ವನ ಹಲುಬುವಿಕೆ ಹೃದಯಸ್ಪರ್ಶಿಯಾಗಿತ್ತು.

''ನಿನಗೆ ಹೇಳುವುದು ಮರೆತ್ತಿದ್ದೆ. ಒಮ್ಮೆ ಲಿಖಿತವಾದ ಬರಹ ಬದಲಾಗಲು ಒಂದು ವರ್ಷ ಬೇಕಾಗುತ್ತೆ.'' ಜಡೆಮುನಿಯ ಈ ವಿವರಣೆ ಸುಧನ್ವನಿಗೆ ಸಾಂತ್ವನ ನೀಡುವುದರಲ್ಲಿ ವಿಫಲವಾಯಿತು.

## ಉಪಸಂಹಾರ

ಹೇಳಲಿನ್ನೇನಿದೆ? ಪಾರಿಗೆ ಎಚ್ ಒನ್ ವೀಸಾ ಸಿಕ್ಕಿ ಅವಳು ಎಲ್ಲರಂತೆ ಅಮೆರಿಕಾಕ್ಕೆ ತೆರಳಿದಳು. ತನಗೇ ಗೊತ್ತಿಲ್ಲದೇ ಒಂದು ಅನಾಹುತಕ್ಕೆ ಕಾರಣಳಾದ ಜುಬೇದಾ, ನಿಸಾರ್ ಎಂಬ ಕವಿಯೊಬ್ಬನನ್ನು ಮದುವೆಯಾಗಿ ಅವನ ಪ್ರಾಣ ತಿನ್ನಲು ಪ್ರಾರಂಭಿಸಿದಳು. ಸುಧನ್ವ ತನ್ನ ಸಂಸ್ಥೆಯನ್ನು ದಕ್ಷತೆಯಿಂದ ನಡೆಸಿಕೊಂಡು ಹೋಗುತ್ತಿದ್ದರೂ, ಬಿಡುವಿನ ಸಮಯವನ್ನೆಲ್ಲಾ ಸೂಕ್ಷ್ಮದರ್ಶಕದಲ್ಲಿ ದೃಷ್ಟಿಸಿ ನೋಡುತ್ತಾ ಕಾಲ ಕಳೆಯುತ್ತಾನೆ ಎಂದು ಅವನ ಸ್ನೇಹಿತರ ದೂರು. ಎಷ್ಟು ನಿಜವೋ ಯಾರು ಬಲ್ಲರು!



# ಚಿಕನ್ ಸೂಪ್ ಕಥೆಗಳು

## ಪಾರ್ಕಿನಲ್ಲೊಂದು ಮಧ್ಯಾಹ್ನ...

– ಎಚ್. ಗೋಪಾಲ ಕೃಷ್ಣ



ರಜಾದಿನ ಮನೆಯಲ್ಲಿದ್ದ ಆರು ವರ್ಷದ ಪುಟ್ಟ ಇವತ್ತು ದೇವರನ್ನು ನೋಡಬೇಕು ಅಂದುಕೊಂಡ. ಪ್ರತಿದಿನ ಶಾಲೆಗೆ ತೆಗೆದುಕೊಂಡು ಹೋಗುವ ಬುಟ್ಟಿಯಲ್ಲಿ ಎರಡು ಬಿಸ್ಕೆಟ್ ಪ್ಯಾಕೆಟ್ಟನ್ನು ಅಟ್ಟದ ಡಬ್ಬಿಯಿಂದ ತೆಗೆದು ಇರಿಸಿಕೊಂಡು. ಖಾಲಿ ಪೆಪ್ಸಿ ಬಾಟಲಿ ತುಂಬಾ ನೀರು ತುಂಬಿಕೊಂಡ. ಅಪ್ಪ ಅಮ್ಮ ಇಬ್ಬರೂ ಒಳಗೆಲ್ಲೋ ಕೆಲಸದಲ್ಲಿದ್ದರು ಕೈಯಲ್ಲಿ ಬುಟ್ಟಿ ಹಿಡಿದು ರಸ್ತೆಗೆ ಇಳಿದ. ಮನೆ ಹತ್ತಿರದ ಪಾರ್ಕಿಗೆ ಬಂದ. ಅಲ್ಲೊಂದು ಅಜ್ಜಿ ಗುಬ್ಬಚ್ಚಿಗಳನ್ನೇ ನೋಡುತ್ತಾ ಕುಳಿತಿತ್ತು. ಪುಟ್ಟ ಹೋಗಿ ಅಜ್ಜಿಯ ಪಕ್ಕ ಕುಳಿತ, ಬುಟ್ಟಿಯಿಂದ ಬಿಸ್ಕತ್ತು ತೆಗೆದು ಅಜ್ಜಿಗೆ ಕೊಟ್ಟ. ಅಜ್ಜಿಗೆ ಕೊಟ್ಟ ನಂತರ ತಾನೂ ಬಿಸ್ಕತ್ತು ತಿಂದ. ಅಜ್ಜಿ ಬಿಸ್ಕತ್ತು ತಿನ್ನುತ್ತ ಈ ಪುಟ್ಟನನ್ನು ನೋಡಿ ನಕ್ಕಳು. ಅಜ್ಜಿಯ ನಗು ಎಷ್ಟು ಚೆನ್ನಾಗಿತ್ತು ಅಂದರೆ ಪುಟ್ಟನಿಗೆ ಮತ್ತೆ ಮತ್ತೆ ಅಜ್ಜಿ ನಗುವುದನ್ನು ನೋಡಬೇಕು ಅನಿಸಿತು. ಮತ್ತೆ ಅಜ್ಜಿಗೆ ಬಿಸ್ಕತ್ತು ನೀಡಿದ. ಅಜ್ಜಿ ಮತ್ತೆ ನಕ್ಕಿತು.

ಬಿಸಿಲೇರುವವರೆಗೆ ಪುಟ್ಟ ಅಲ್ಲೇ ಅಜ್ಜಿಯ ಸಂಗಡ ಕೂತು ಬಿಸ್ಕತ್ತು ತಿಂದ, ನೀರು ಕುಡಿದ ನೀರು ಕುಡಿದ ಬಿಸ್ಕತ್ತು ತಿಂದ. ಅಜ್ಜಿಯ ನಗು ಕಂಡು ಸಂತೋಷಪಟ್ಟ. ಮಧ್ಯಾಹ್ನವಾದಂತೆ ಮನೆಯ ನೆನಪು ಬಂತು. ಎದ್ದು ಮನೆಯ ಕಡೆಗೆ ಹೊರಟ. ಕೊಂಚ ದೂರ ಬಂದನಂತರ ಅದೇನೋ ನೆನಸಿಕೊಂಡ ಮತ್ತೆ ಪಾರ್ಕಿಗೆ ಓಡಿದ. ಅಲ್ಲಿ ಅಜ್ಜಿಯನ್ನು ಅಪ್ಪಿದ. ಅಜ್ಜಿ ಈಗ ಇನ್ನೂ ಸಂತೋಷದಿಂದ ನಕ್ಕಳು. ಪುಟ್ಟ ಮನೆ ಸೇರಿದ. ಅವನ ಮುಖದ ಮೇಲಿದ್ದ ಸಂತೋಷ ಗಮನಿಸಿದ ಅಮ್ಮ ಕೇಳಿದಳು ''ಅದೇನು ಮಾಡಿದೆ ಅಷ್ಟೊಂದು ಸಂತೋಷದಿಂದಿದೆ ನಿನ್ನ ಮುಖ?''

ಪುಟ್ಟ ಉತ್ತರಿಸಿದ ಇವತ್ತು ದೇವರ ಸಂಗಡ ಬಿಸ್ಕತ್ತು ತಿಂದೆ. ನಿನಗೆ ಗೊತ್ತಾಮ್ಮಾ ದೇವರು ಎಷ್ಟು ಚೆನ್ನಾಗಿ ನಗುತ್ತೆ ಅಂತಾ?... ಅದೇ ಸಮಯದಲ್ಲಿ

ಪಾರ್ಕಿನ ಅಜ್ಜಿ ಮನೆ ಸೇರಿದ್ದಳು. ಆಕೆಯ ಮುಖದ ಮೇಲಿನ ಹರ್ಷ ಕಂಡು ಆಕೆಯ ಮಗ ಕೇಳಿದ ''ಅದೇನಮ್ಮಾ ಇಷ್ಟು ಖುಷಿಯಿಂದ ಇದೀಯಾ?...''

''ಇವತ್ತು ಪಾರ್ಕಿನಲ್ಲಿ ದೇವರ ಜತೆ ಬಿಸ್ಕತ್ತು ತಿಂದೆ. ದೇವರು ಇಷ್ಟೊಂದು ಚಿಕ್ಕವನು ಅಂತ ನನಗೆ ತಿಳಿದೇ ಇರಲಿಲ್ಲ'' ಅಜ್ಜಿ ಉತ್ತರಿಸಿತು.

## ''ಮನೆಗೆ ಬಾ....''




ಕಿಟ್ಟಿ ಅವನ ಅಪ್ಪ ಅಮ್ಮನ ಹತ್ತಿರ ಯಾವುದೋ ಸಣ್ಣ ಕಾರಣಗಳ ಜಗಳ ಆಡಿದ. ಕೋಪದ ಭರದಲ್ಲಿ ಅವನಪ್ಪ ''ಇಂಥಹ ಮಕ್ಕಳಿರೂದಕ್ಕಿಂತ ಸಾಯೋದೇ ವಾಸಿ'' ಅಂದ. ಕಿಟ್ಟಿಗೆ ಅಸಾಧ್ಯ ಕೋಪ ಬಂತು. ಅವತ್ತು ರಾತ್ರಿಯೇ ಆತ ಮನೆಬಿಟ್ಟು ಓಡಿಹೋದ.

ಕಿಟ್ಟಿ ಅಪ್ಪನಿಗೆ ಮಾರನೇ ದಿವಸ ಕಿಟ್ಟೀನ ನೊಡದೇ ತುಂಬಾ ಬೇಜಾರಾಯಿತು. ತಾನು ಹಾಗನ್ನಬಾರದಿತ್ತು ಅಂತ ಅನಿಸಿತು. ಮಗನಿಗಿಂತಲೂ ದೊಡ್ಡದೇನಿದೆ ಅಂತ ಅನಿಸಿತು. ಕೂಡಲೇ ಪೇಟೆ ಬೀದಿಗೆ ನಡೆದ ಅಲ್ಲಿನ ಮುಖ್ಯ ಸ್ಥಳ ಅಂದರೆ ಧ್ವಜ ಕಂಬದ ಪಕ್ಕ ಒಂದು ಹಲಗೆ ನೇತುಹಾಕಿದ. ಕಿಟ್ಟಿ ಮನೆಗೆ ಬಾ ನಿನ್ನನ್ನ ನಾನು ಪ್ರೀತಿಸ್ತೀನಿ ನಾಳೆ ಮಧ್ಯಾಹ್ನ ಇಲ್ಲಿ ಭೇಟಿಯಾಗೋಣ...''

ಮಾರನೇ ಮಧ್ಯಾಹ್ನ ಕಿಟ್ಟಿ ಅಪ್ಪ ಧ್ವಜ ಸ್ತಂಭದ ಹತ್ತಿರ ನಡೆದರೆ ಅಲ್ಲಿ ಎಂಟು ಜನ ಕಿಟ್ಟಿ ಹೆಸರಿನವರು ನಿಂತಿದ್ದರು. ಎಲ್ಲರೂ ಪ್ರೀತಿಯ ಕರೆಗೆ ಓಗೊಡುತ್ತಿದ್ದರು - ತಮ್ಮ ತಂದೆಯೇ ತಮ್ಮನ್ನು ಮತ್ತೆ ಮನೆಗೆ ಕರೆದಿರುವುದು ಎಂದು ಅಲ್ಲಿಗೆ ಬಂದಿದ್ದರು

(ಮೂಲ: Chicken soup for the soul)

**ಸಲಹೆ**

**ಸಂಸಾರವೆಂಬ ಪರೀಕ್ಷೆಯಲ್ಲಿ ಪಾಸಾಗಬೇಕಾ? ಚೆನ್ನಾಗಿ ಓದಿ ಅರ್ಥಮಾಡಿಕೊಳ್ಳಿ ಮಡದಿ ಎಂಬ ದಪ್ಪ ಪುಸ್ತಕ**

**– ಎಚ್. ಡುಂಡಿರಾಜ್**

# ಶರಲೇಖನ 'ಲೇಖನ' ಸಾಹಸ!

– ಪ್ರಕಾಶ್



ನನ್ನ ಹೆಸರು ವತ್ಸನ, ಪ್ರಖ್ಯಾತ ಪತ್ತೇದಾರನಾದ ಶರಲೇಖನನ ಸೈಡ್‌ಕಿಕ್ ಆಗಿ ಬಹುಕಾಲ ನರಳಿದ ನತದೃಷ್ಟ, ಆದರೆ ಶರಲೇಖನ ಸಾಹಸಗಳನ್ನು ಉಲ್ಲೇಖಿಸಿ ಅಸಂಖ್ಯಾತ ಜನರಿಗೆ ರಸದೌತಣ (ಹೇಗಿದೆ ವರ್ಡು?) ಬಡಿಸುತ್ತ ಬಂದಿದ್ದೇನೆ. ಈ ನಡುವೆ ನಾನು ತನ್ನದೇ ಆದ ತಾಪತ್ರಯಗಳ ದೆಸೆಯಿಂದ ಶರಲೇಖನನ್ನು ಮರೆತಿದ್ದೆ. ಈಗ ಅವನ ಲೇಟೆಸ್ಟ್ ಸಾಹಸವನ್ನು ಹೇಳುವ ಭಾಗ್ಯ ನನ್ನದು. ಆದರೆ ಈ ಲೇಖನದ ಕಥೆಯ ಹಿರಿಯ ಪಾತ್ರಧಾರಿ ಇನ್ನೂ ಬದುಕಿದ್ದು, ಸ್ವಲ್ಪ ಕಿರಿಕಿರಿಯ ಮನುಷ್ಯನಾಗಿದ್ದರಿಂದಲೂ, ಅವನ ತಮ್ಮ ಲಾಯರ್ ಆಗಿದ್ದರಿಂದಲೂ, ಅವರ ಹೆಸರುಗಳನ್ನು ಬಹಿರಂಗ ಪಡಿಸುವಂತಿಲ್ಲ. ಓದುಗರು ಸಹನೆ ತೋರಬೇಕು!

ಆ ದಿನ ಬೆಳಿಗ್ಗೆಯಿಂದ ಚಿಟಿ ಚಿಟಿ ಮಳೆ! ನಾನು ಪೇಪರೋದುತ್ತ ಕೂತಿದ್ದೆ. ಶರಲೇಖ ಪಿಟೀಲು ಬಾರಿಸಲು ಸನ್ನದ್ಧನಾದ. (ಮಳೆಯ ಕಾರಣದಿಂದ) ಅವನಿಗೆ ನಾನು ಏಕಮಾತ್ರ ಕೇಳುಗ! ಆಗ, ಬಾಗಿಲು ಧಡಧಡ ತಟ್ಟಿದ ಸದ್ದು. ನಮ್ಮ ಪರಿಚಾರಕ ಹುಸೇನ ಬಾಗಿಲು ತೆಗೆದ. ಒಬ್ಬ ದೃಢಕಾಯ ವ್ಯಕ್ತಿ ಒಳಗೆ ಬಂತು. ಆರಡಿ ಎತ್ತರ; ಮುಖದಲ್ಲಿ ಕೋಪ! ಶರಲೇಖ ನಸುನಗುತ್ತ, ''ಬನ್ನಿ, ಬನ್ನಿ! ಹಾಸ್ಯ ಲೇಖಕರ ಮುಖದಲ್ಲಿ ಕೋಪದ ಛಾಯೆ ಇನ್‌ಕಾಂಗ್ರುಯಸ್!'' ಎಂದ. ಆ ವ್ಯಕ್ತಿ, ''ಓ, ನಾನು ಯಾರು ಗೊತ್ತೆ?' ಎಂದ. ಶರಲೇಖ, ''ನಾಡಿನ ಪ್ರಖ್ಯಾತ ಹಾಸ್ಯಲೇಖಕರಾದ ನಿಮ್ಮ ಹೆಸರನ್ನು (ಇನ್ನು ಮುಂದೆ ಹಾ.ಲೇ. ಎಂದು ಸೂಚಿಸಿದೆ) ಕೇಳದವರಾರು?'' ಎಂದ. ಹುಸೇನ ಮೂರು ಕಪ್ಪು ಕಾಫಿ ತಂದಿಟ್ಟ.

ಹಾ.ಲೇ. ಕಾಫಿ ಕುಡಿಯುತ್ತ, ''ನನ್ನ ಮನೆಯಿಂದ ಅತಿ ಮುಖ್ಯ ಲೇಖನ ಕಳವಾಗಿದೆ! ಅದನ್ನ ಅಪರಂಜಿ ವಿಶೇಷ ಸಂಚಿಕೆಗೆ ಕಳಿಸಲು ತಯಾರು ಮಾಡಿ ಇಟ್ಟಿದ್ದೆ! ಬೆಳಿಗ್ಗೆ ನೋಡಿದರೆ ಮಂಗಮಾಯ! ಯಾರೋ ದುರುಳರು ತಮ್ಮ ಹೆಸರಿನಲ್ಲಿ ಅದನ್ನ ಸಂಪಾದಕರಿಗೆ ಕಳಿಸಿದರೆ?'' ಎಂದ. ನಾನು ''ಅದರ ಕಾಪಿ ಇರಬೇಕಲ್ಲ?'' ಎಂದೆ. ಹಾ.ಲೇ. ಜಗ್ಗನೆ ಎದ್ದು, ಕೋಪದಿಂದ, ''ನಾನು ಕಾಪಿ ಇಟ್ಟುಕೊಳ್ಳುವವನಲ್ಲ! ಕವರಿನಲ್ಲಿಟ್ಟುದಂ ಕಾಪಿ ಮಾಡೊದೊಂದಗ್ಗಳಿಕೆ!''

ಎಂದ. ನಾನು ನಡುಗಿದೆ. ಹಾ.ಲೇ. 'ಶರಲೇಖ, ನೀನು ಏನಾದರೂ ಮಾಡಿ ನನ್ನ ಲೇಖನ ಹುಡುಕಲೇ ಬೇಕು! ಹಣದ ಬಗ್ಗೆ ಯೋಚನೆ ಮಾಡಬೇಡ!' ಎಂದ.

ಶರಲೇಖ, ''ಕೇಸು ಬಹಳ ಜಟಿಲವಾಗಿದೆ! ಎರಡೇ ದಿನದಲ್ಲಿ ಸಾಲ್ವಾಗದಿದ್ದರೆ ನನ್ನ ಹೆಸರನ್ನೇ ಬದಲಾಯಿಸಬಹುದು!'' ಎಂದು ಗುಡುಗಿದ. ನಾನು, ''ಯಾವ ಹೆಸರಿಗೆ?'' ಎಂದೆ. ಶರಲೇಖ ಕುಪಿತ ವ್ಯಾಘ್ರನಂತಾದ! ''ಈ ಕೇಸ್ ಆದಮೇಲೆ, ನನ್ನ ಹೆಸರು ಶರಲೇಖನಲ್ಲದಿದ್ದರೆ, ನನ್ನ ಹೆಸರು ಶರಲೇಖನೇ ಅಲ್ಲ!'' ಎಂದು ಕೂಗಿದ. ಈ ಕಾಂಪ್ಲಿಕೇಟೆಡ್ ವಾಕ್ಯದಿಂದ ನಾನು ಚಿಂತಾಕ್ರಾಂತನಾದೆ! ಹಾ.ಲೇ. ಕಾಫಿ ಮುಗಿಸಿ ಹೊರಟ.

ಶರಲೇಖ, ''ವತ್ಸನ, ನೀನು ನನ್ನ ಸ್ಥಿತಿಯಲ್ಲಿ ಇದ್ದಿದ್ದರೆ ಏನು ಮಾಡುತ್ತಿದ್ದೆ?'' ಎಂದ. ನಾನು ಕೂಡಲೇ, ''ಪಿಟೀಲು ಬಾರಿಸುವುದನ್ನು ನಿಲ್ಲಿಸುತ್ತಿದ್ದೆ!'' ಎಂದು ನಕ್ಕೆ. ಶರಲೇಖ, ''ಸಾಲ್ಗು ಸಾಲ್ಗು ಮಿಾ ಪರಿಹಾಸ್ಯಂ!'' ಎಂದ. ನಾನು, ''ಶರಲೇಖ, ಬೇರೆ ಯಾರಾದರೂ ಹಾಸ್ಯ ಲೇಖಕರದ್ದೇ ಇದು ಕೆಲಸ!' ಅಂದೆ. ಶರಲೇಖ ತಲೆ ಅಲ್ಲಾಡಿಸಿದ. ''ಇಲ್ಲ, ಹಾಸ್ಯಲೇಖಕರಲ್ಲೆಲ್ಲ ಒಂದು Honour Among Thieves ಇರುತ್ತೆ! ಬೇರೆ ಭಾಷೆಯಿಂದ ಕದೀತಾರೆ, ಆದರೆ ಸ್ವಜಾತಿಯವರಿಂದ ಕದಿಯುಲ್ಲ! ಒಂದು ಸ್ಟ್ರೇಂಜ್ ತರಹ ಜಂಭ ಅದು' ಎಂದ. ಪಿಟೀಲು ಕೈಗೆ ತೆಗೆದುಕೊಂಡು ಶಂಕರಾಭರಣ ಬಾರಿಸತೊಡಗಿದ. ಹನ್ನೊಂದು ಗಂಟೆಗೆ ಮನೆ ಬಿಟ್ಟು ಹೊರಟು, ಸಂಜೆ ಏಳು ಗಂಟೆಗೆ ವಾಪಸ್ ಬಂದ. ಅವನ ಮುಖಾರವಿಂದದಿಂದ ಯಾವ ತಾಜಾ ಕ್ಲೂ ಸಹ ಸಿಕ್ಕಿರಲಿಲ್ಲ ಎಂದು ಅಂದುಕೊಂಡೆ. ರಾತ್ರಿ ಊಟವಾದ ಮೇಲೆ, ಶರಲೇಖ, ''ವತ್ಸನ, ಈ ದಿನ ಹಲವಾರು ಜಾಗಗಳಿಗೆ ಹೋಗಿ, ಕ್ಲೂಗಳಿಗಾಗಿ ಹುಡುಕಾಡಿದ್ದೇನೆ. ಆದರೆ ಕೇಸು ಬಹು ಇಂಟರೆಸ್ಟಿಂಗಾಗಿದೆ! ಈ ಕಳ್ಳತನ ಯಾರು ಮಾಡಿರಬಹುದು ಎಂದು ಪಟ್ಟಿ ಮಾಡೋಣ!'' ಎಂದ. ನಾನು ''ಪತ್ರಿಕೆಯ ಸಂಪಾದಕರು?'' ಎಂದೆ ''ಇಲ್ಲ!'' ''ಹಾಗಾದರೆ ಹಾ.ಲೇ. ಮನೆಯ ಪರಿಚಾರಕರು ಯಾರಾದರೂ?'' ''ಇಲ್ಲ, ಅವರಿಗೆ ಹಾಸ್ಯ ಪ್ರಜ್ಞೆ ಇರುವುದು ಬಹಳ ಇಂಪ್ರಾಬಬಲ್!'' ''ಪ್ರೆಸ್ಸಿನಿಂದ ಯಾರಾದರೂ ಹಣದಾಸೆಗೆ ಬೇರೆ ಪತ್ರಿಕೆಗೆ...?'' ''ಇಲ್ಲ, ಈ ಲೆವೆಲ್ ಹಾಸ್ಯ ಬೇರೆ ಪತ್ರಿಕೆಗಳಲ್ಲಿ ಪ್ರಿಂಟಾಗುವುದು ಅನ್‌ಲೈಕ್ಲೀ!'' ನಾನು ಸುಮ್ಮನಾದೆ. ''ಪ್ರಿಂಟಾದರೂ, ಕನ್ನಡದಲ್ಲಿ ಬಿಗ್‌ಮನೀ ಎಲ್ಲಿದೆ?'' ಅಂದೆ! ಇದ್ದಕ್ಕಿದ್ದಂತೆ ಶರಲೇಖ ಟೆಲಿಫೋನ್ ಬಳಿ ಓಡಿದ. ಹಾ.ಲೇ. ಮನೆಗೆ ಫೋನಿದ. ''ನಿಂ ಆರ್ಟಿಕಲ್ಲುಗಳನ್ನ ಅಪರಂಜಿ ಆಫೀಸ್‌ಗೆ ಹೇಗೆ ಕಳಿಸ್ತೀರ?'' ಅಂದ. ಹಾ.ಲೇ. ಉತ್ತರ ಕೇಳಿ ನಸುನಕ್ಕ,

''ಬಾ ವತ್ಸನ! ದಿ ಗೇಮ್ ಈಸ್ ಅಫುಟ್'' ಅಂತ ನನ್ನ ಕೈ ಹಿಡಿದೆಳೆದ. ರಾತ್ರಿ ಕೊರೆಯುವ ಚಳಿಯಲ್ಲಿ ನಗರದ ಬಡಾವಣೆಯೊಂದರಲ್ಲಿ ಭವ್ಯ ಸೌಧದ ಹತ್ತಿರ ಹೋದೆವು. ಹೊರಬಾಗಿಲಿನ ಹತ್ತಿರ ನಿಂತಿದ್ದ ವಾಚ್‌ಮನ್‌ಗೆ ಶರಲೇಖ ತನ್ನ ವಿಸಿಟಿಂಗ್ ಕಾರ್ಡ್ ಕೊಟ್ಟ. ಎರಡೇ ನಿಮಿಷದಲ್ಲಿ ನಮ್ಮನ್ನ ಒಳಗೆ ಕರೆದುತರಲು ಅಪ್ಪಣೆ ಸಿಕ್ಕಿತು! ಬಾಗಿಲ ಹತ್ತಿರ ಶರಲೇಖನ ಕಡುವೈರಿ ಮರಿಯಾಟ್ಟಿ (ಉತ್ಸುಕ ಓದುಗರು, ಇದೇ ಲೇಖಕರ 'ಶರಲೇಖನ ಶತ್ರುಗಳು' ಎಂಬ ಗ್ರಂಥವನ್ನು ಓದಬಹುದು - ರಿಯಾಯಿತಿ ದರ ನೂರೇ ರೂಪಾಯಿ) ನಗುತ್ತ ನಿಂತಿದ್ದ. ''ಬನ್ನಿ, ದಯಮಾಡಿ!'' ಎಂದು ಕೃತಕ ನಗೆ ಬೀರಿದ. ಅವನ ಚಿನ್ನದ ಹಲ್ಲುಗಳು ಬೆಳಕಿನಲ್ಲಿ ಹೊಳೆದವು. ''ಏನು ಸಮಾಚಾರ ಶರಲೇಖರರರೇ, ಬಡವನ ಬಳಿಗೆ ಬರಲು ಕಾರಣ?'' ಎಂದ. ಶರಲೇಖ ಗಂಭೀರವಾಗಿ, ''ಮರಿಯಾಟ್ಟಿ, ಹಾಸ್ಯ ಲೇಖನ ನಿನ್ನ ಹತ್ತಿರ ಇದೆ ಅಂತ ನನಗೆ ಗೊತ್ತು! ಹೆಚ್ಚು ಗಲಾಟೆ ಮಾಡದೆ ನನಗೆ ಕೊಡು!'' ಅಂದ. ಮರಿಯಾಟ್ಟಿ ಚಂಗನೆ ಸೋಫಾದಿಂದ ಎಗರಿದ. ಅವನ ಮುಖದಲ್ಲಿ ಭಯದ ಛಾಯೆ! ಮಾತನಾಡದೆ, ಸೇಫ್‌ನಿಂದ ಕವರ್ ಒಂದನ್ನು ತೆಗೆದುಕೊಟ್ಟ. ನಾನು ಚಕಿತನಾದೆ.

ಮರುದಿನ ಬೆಳಿಗ್ಗೆ ಹಾ.ಲೇ.ನಮ್ಮ ಮನೆಗೆ ಬಂದರು. ತಮ್ಮ ಲೇಖನವನ್ನು ನೋಡಿ, ಚಿಕ್ಕ ಮಗುವಿನಂತೆ ನಲಿದಾಡಿದರು. ''ಯಾರು ಆ ದುರುಳ?'' ಎಂದು ಕೂಗಿದರು. ಶರಲೇಖ ನಿರ್ಲಿಪ್ತನಾಗಿದ್ದ. ''ನಿಂ ಕೆಲಸ ಆಯ್ತಲ್ಲ! ಹೊರಡಿ'' ಎಂದ. ಹಾ.ಲೇ. ಸಂಭ್ರಮದಿಂದ ಹೊರಟರು.

ಸಂಜೆ ಶರಲೇಖ ಹೇಳಿದ. ''ಹಾ.ಲೇ. ಅವರ ಮನೆಯಲ್ಲಿ ಹೊಸದಾಗಿ ಒಬ್ಬ ಜವಾನ ಸೇರಿದ್ದಾನೆ. ಅವನು ಮರಿಯಾಟ್ಟಿಯ ಬಂಟ. ಹಾ.ಲೇ. ಲೇಖನ ಗ್ಯಾರಂಟೀ ಅಂತ ಅಪರಂಜಿ ಸಂಪಾದಕರು ಕೊನೇ ನಿಮಿಷದ ತನಕ ಸುಮ್ಮನಿರ್ತಾರೆ! ಆಗ ಅವರಿಂದ ಭಾರೀ ಹಣ ಕಿತ್ತು ಲೇಖನ ಕಳಿಸೋಣ ಅಂತ ಮರಿಯಾಟ್ಟಿ ಪ್ಲಾನ್ ಮಾಡಿದ್ದ!''

''ಆದರೆ ಮರಿಯಾಟ್ಟಿ ಯಾಕೆ ಹಾಗೆ ಗಲಾಟೆ ಮಾಡದೆ ಲೇಖನ ಕೊಟ್ಟುಬಿಟ್ಟ?''

''ನಾನೇ ಮರಿಯಾಟ್ಟೀಗೆ ಫೋನ್ ಮಾಡಿ, ಆ ಲೇಖನದ ಆಥರ್ ಮಿ|| ಮರಿಯಾಟ್ಟಿ ಅಂತ ಸಂಪಾದಕರಿಗೆ ಹೇಳಿ ಹಾಕಸ್ತೀನಿ! ಅಂತ ಬೆದರಿಸಿದ್ದೆ.'' ನನ್ನ ಮಂಕು ಬುದ್ಧಿಗೆ ಇದರ ಗೂಢಾರ್ಥ ಹೊಳೆಯಲಿಲ್ಲ. ಶರಲೇಖ ಹೇಳಿದ. ''ಮಂಕೇ, ಅಂಡರ್‌ವರ್ಲ್ಡ್ ಜಗತ್ತಿನಲ್ಲಿ, ಮರಿಯಾಟ್ಟಿ ಹಾಸ್ಯಲೇಖನ ಬರೆದಿದ್ದಾನೆ ಅಂತ ಸುದ್ದಿ ಹರಡಿದರೆ, ಅವರ closely gaurded ವಿಲನ್ ಇಮೇಜ್ ನುಚ್ಚು ನೂರಾಗಿ ಹೋಗೋದು!!''

ನಾನು ನನ್ನ ಪೂರ್ವ ಜನ್ಮಕೃತ ಕರ್ಮದಿಂದಾಗಿ, ಛಂಗನೆ ಎಗರಿ ಬಿದ್ದೆ!!

ಪಿಂಟುಚಾ ಕೊರವಂಜಿ



ಯಾಕೆ ನಿಂತಿದ್ದೀರಿ? ಕೂತ್ಕೊಳ್ಳಿ ಸ್ವಾಮಿ ಕುರ್ಚೀಲಿ!

# ಗುಂಡ್ಲು ಪಂಡಿತರ ಚಂಡಪ್ರಚಂಡ ಮಹಾಕಾವ್ಯ

– ನೀಲತ್ತಹಳ್ಳಿ ಕಸ್ತೂರಿ

(ಜಿ.ಪಿ. ರಾಜರತ್ನಂ ಅವರ 'ಪುರುಷ ಸರಸ್ವತಿ' ಕಾವ್ಯಕ್ಕೆ ಒಂದು ಕಿಂಡಿನೋಟ)

೧೯೪೦ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ವಿಶಿಷ್ಟವಾದ ವಿಶೇಷ ಘಟ್ಟ. ಏಕೆಂದರೆ ಅದೇ ಸಂವತ್ಸರದಲ್ಲಿ ಕನ್ನಡ ಹಿಂದೆ ಕಾಣದ, ಅಂದು ನೋಡದ, ಮುಂದೆ ಕಾಣಲಾರದ ಒಂದು ಮಹಾ ಗ್ರಂಥವನ್ನು ಕಂಡದ್ದು. ಆ ಗ್ರಂಥ 'ಪುರುಷ ಸರಸ್ವತಿ' ಅದರ ಕರ್ತೃ ಪುರುಷ ಸರಸ್ವತಿ. ಅದನ್ನು ಪಾತಾಳದ ಪ್ರತಿಯಿಂದ ಹಾಗೂ ಆಕಾಶದ ಪ್ರತಿಯಿಂದ ಸಂಪಾದಿಸಿ ಪ್ರಕಟಿಸಿದವರು ಜಿ.ಪಿ. ರಾಜರತ್ನಂ.

ಈ ಕವಿ ಯಾರು? ಇವನ ಕುಲಗೋತ್ರ, ಕಾಲ ಯಾವುದು? ಉತ್ತರ ಗೊತ್ತಿಲ್ಲ. ಆದರೆ ಕೃತಿಯಿಂದ ಗೊತ್ತಾಗುವುದು ಇಷ್ಟು - ಈತನ ಹೆಸರು ''ಪುರುಷ ಸರಸ್ವತಿ'' ತವರೂರು ತಾವರೆಪುರ, ತಂದೆ ಲಕ್ಷ್ಮೀರಮಣ, ಹೆಣ್ಣು ಕೊಟ್ಟ ಮಾವ ಬೆಟ್ಟದಯ್ಯ, ಈತನ ಕಾಲ ಮಹಾಭಾರತ ಯುದ್ಧಕ್ಕೆ ಈಚಿನದು ಅಥವಾ ಮಹಾಭಾರತ ಯುದ್ಧಕ್ಕೆ ಹಿಂದಿನಲ್ಲ. ಈತ ಕಾವ್ಯದಲ್ಲಿ ಹರಿಹರ ಹಿರಣ್ಯಗರ್ಭ ಮೂವರನ್ನೂ ಯಾವ ತಕರಾರೂ ಇಲ್ಲದೆ ಸ್ಮರಿಸಿದ್ದಾನೆ. ಆದ್ದರಿಂದ ಈತ ವೈಷ್ಣವನೆ, ಶೈವನೇ, ಬೇರೆಯೆ ಆ ಮೂವರೂ ದೇವರುಗಳಿಗೂ ಅನುಮಾನವೇ!

ಕವಿಯ ಮಹತ್ತಿಗೆ ಸಾಕ್ಷಿ ಆತನ ಬಿರುದಾವಳಿ. ಬಾಯಿತುಂಬ ಹೇಳಬಹುದು ಬೇಜಾರಾಗುವವರೆಗೆ-

ಪ್ರಾಕ್ಕಾವ್ಯ ಪರಬ್ರಹ್ಮ,

ಪ್ರಾಚೀನ ಪ್ರೌಢ ಪ್ರಬಂಧ ಪಿನಾಕಿ

ಪರಮಾಲಂಕಾರ ಪ್ರದರ್ಶನ ಪ್ರವೀಣ ಪದ್ಮನಾಭ।

ಪುರಾತನ ಕವಿಕೇಸರಿ ಪುರಾಣ ಕವಿತಾ ವಿಚಕ್ಷಣ ಪ್ರಾಚೀನ ಕಾವ್ಯ ಶಿರೋಮಣಿ

ಪ್ರಾಕ್ಪುರಾತನ ಕವಿರಾಜ. ಪ್ರಪ್ರಾಚೀನ ಕವಿರತ್ನ.

ಕರ್ಣಾಟಕ ಕುಲಕ್ರಮಾಗತ ಕವಿರಾಜಮಾರ್ಗ ಪ್ರತಿಪನ್ನ ಪ್ರಚಣ್ಡ ಪರಮೇಶ್ವರ

ಸಕಲ ಸುನಿಪುಣ ಸಾಹಿತ್ಯ ಸರ್ವಸ್ವ ಸಂಯುಕ್ತ ಸರ್ವೇಶ್ವರ

ಕವಿ ನರಪಾಳ ಕುಳಕಪ್ರಿಯ ಇತ್ಯಾದಿ.

ಪ್ರೊಫೆಷನಲ್ ವಂದಿಮಾಗಧರಿಗೂ ಉಗ್ಗಡಿಸಲು ಉಸಿರು ಕಟ್ಟಿಸುತ್ತದೆ ಅಲ್ಲವೇ? 'ಪಿ'ಕಾರ, 'ಕ'ಕಾರ, 'ಸ'ಕಾರ ಪ್ರಾಸಗಳು ಸಾಕೇ? ನಿಜಕ್ಕೂ ಕವಿ ಅಲಂಕಾರ ಪ್ರದರ್ಶನ ಪ್ರವೀಣನೇ.

ಈ ಕಾವ್ಯವನ್ನು ''ಗುಪ್ತ ಸಂಪಾದಕ ಪಂಚಕ'' ಸಂಪಾದಿಸಿತಂತೆ!

ಹೌದು ಈ ಕಾವ್ಯ ಏನು, ಎಂಥದು, ಏನಿದೆ ಇದರಲ್ಲಿ? ಪುಸ್ತಕ ತೆರೆದೊಡನೆ ತಲೆಮೇಲೆ ಬಂದು ಬೀಳುವುದು ಮುನ್ನುಡಿ ಪ್ರಪಂಚ. ಕಾವ್ಯ ಪ್ರಪಂಚ ಜೋರೋ, ಮುನ್ನುಡಿ ಪ್ರಪಂಚ ಜೋರೋ ಹೇಳುವುದು ಕಷ್ಟ. ಅಂದಿನ ಕನ್ನಡದ ಏಳು ಘಟಾನುಘಟಿಗಳ ಏಳು ಮುನ್ನುಡಿಗಳು! ಸಾಕೇ? ರಾಷ್ಟ್ರಕವಿ ಆದ ಮಂಜೇಶ್ವರ ಗೋವಿಂದಪೈ, ವಿನಾಯಕ ಕೃಷ್ಣ ಗೋಕಾಕ, ಸುತ್ತಲೂ ಲತ್ತೆಕೊಡುತ್ತಿದ್ದ ಶಿವರಾಮ ಕಾರಂತ, ಶೈಲಿಯ ರಂಗಣ್ಣ, ಶ್ರೀರಂಗರಾದ ಆರ್.ವಿ. ಜಾಗೀರದಾರ, ಮನಸ್ಸಿನ ಬಾಗಿಲನ್ನು ತೆರೆದು ನೋಡುತ್ತಿದ್ದ ಡಾ|| ಎನ್.ಎಸ್. ನಾರಾಯಣ ಶಾಸ್ತ್ರಿ ಮತ್ತು ಮಾತಿನ ಮೋಡಿಗಾರ ಬೇಂದ್ರೆ! ಶಿವಗಂಗೆ ಬೆಟ್ಟಕ್ಕೆ ನಾಲ್ಕು ಆಕಾರವಂತೆ. ಇಲ್ಲಿ 'ವಿಡಂಬನೆ' ಬೆಟ್ಟಕ್ಕೆ ಏಳು ಆಕಾರಗಳು! ಈ ಸಪ್ತರ್ಷಿ ಮಂಡಲದ ವಿಚಾರದ ಏಳುಸುತ್ತಿನ ಕೋಟೆಯನ್ನು ದಾಟಿದರೆ ಸಿಗುವುದು ಪುರುಷ ಸರಸ್ವತಿ ಕವಿಯ ''ತ್ರಿಲೋಕಕುಲ್ಯ ಮಹಾಕ್ಷುದ್ರಕಾವ್ಯ ಪ್ರಪಂಚವು'' ಇದಕ್ಕೆ ''ದುಷ್ಟಬುದ್ಧಿಯೆಂಬವನ ದೊಡ್ಡಯ್ಯನ ದೇಹಿಶ್ರನಾದ ವಿಪರೀತ ಬುದ್ಧಿಯ ವಿಸ್ತರ ವ್ಯಾಖ್ಯಾನ'' ಕಾಳಿದಾಸನಿಗೆ ಮಲ್ಲಿನಾಥ ಇದ್ದಹಾಗೆ. ಈ ಕಾವ್ಯ ಪ್ರಕಟವಾದುದು'' ಲೋಕ ಹಿತಾರ್ಥಮಾಗಿ'' ಇದು 'ಕುರುಚುಗಬ್ಬ' ಎಂಬ ಜಾತಿಯ ಕಾವ್ಯ!

ಕಾವ್ಯ ಅಚ್ಚಾದ ಮೇಲೆ ಗೊತ್ತಾಯಿತಂತೆ, ''ಕಾವ್ಯ ಕರ್ತೃ, ವ್ಯಾಖ್ಯಾನಕಾರ, ಗುಪ್ತಸಂಪಾದಕ, ಪಂಚಕ ಸರ್ವವೂ ಜಿ.ಪಿ. ರಾಜರರತ್ನಂ ಎಂ.ಎ. ಎಂಬುವರೆಂದು''

ಮೊದಲನೆಯದು ಸ್ತೋತ್ರಪಂಚಕ. ೫ ಷಟ್ಪದಿಗಳು. ಕನ್ನಡಾಂಗ್ಲೋಭಯ ಭಾಷೆಯ ರಚನೆ. ಒಂದು ಸ್ಯಾಂಪಲ್ ನೋಡಿ. ಮಹಾಕವಿಯನ್ನು ಹೊಗಳುವ ಪದ್ಯ ಇದು-

ಕೌಂಗು ನೀ ನಾ ಕುರುಚಲೆನ್ನೀ

ಟಾಂಗದೆದುರಿಗೆ ಬಸ್ಸು ನೀ ಕಿಂಗ್

ಕಾಂಗು ನೀ ಕ್ರಿಮಿ ನಾನು ಪುಂಗವ ನೀನು ನಾನೇನು

ಆಂಗ್ಲ ಕನ್ನಡವೆರಡರಲು ನಾ

ರ್‍ಯಾಂಗ್ಲರಾದವನಿದಿಗೊ ಹೇಯ್ಲ್‌ಹೇಯ್ಲ್

ಲಾಂಗ್ಲಿವೆನುವೆನು ಪುರಿಸ ಸರಸತಿ ಹಿಪ್ಹಿಪ್ಹುರೆಯೆಂಬೆ.

ಅರ್ಥ ಅಗತ್ಯ ಅಲ್ಲವೇ?

ನೀನು ಅಡಕೆಮರ, ನಾನೊ ಕುರುಚಲು, ನನ್ನದು ಬಡಕಲು ಟಾಂಗಾ, ನೀನು ಬಸ್ಸು, ನೀನು ಕಿಂಗ್‌ಕಾಂಗು (ಮಹಾಕವಿ, ಮಲ್ಲಾಧಾಂಡಿಗ) ನಾನೊ ಕ್ರಿಮಿ, ನೀನು ಶ್ರೇಷ್ಠ, ನಾನೊ? ಆಂಗ್ಲ ಕನ್ನಡ ಎರಡರಲ್ಲೂ ನಾನು ರ್‍ಯಾಂಗ್ಲರ್ (ನಿಪುಣ); ಇದೇ Hail Hail, long love ಪುರಿಸ ಸರಸತಿ ಎನ್ನುತ್ತೇನೆ. Hip Hip Hurray!

'ಕರ್ನಾನಾಟಕ' ಪುರಾಣ ಒಂದು ಶತಕಾರ್ಧ ಷಟ್ಪದ. ಅಂದರೆ ೫೦ ಷಟ್ಪದಿಗಳ ಕಾವ್ಯ. ಆಗತಾನೇ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಂದು ಭಾರಿ ತಕರಾರು ಎದ್ದಿತ್ತು, 'ಕರ್ಣಾಟಕ' ಸರಿಯೊ, 'ಕರ್ನಾಟಕ' ಸರಿಯೊ ಎಂದು. ಹಳೆಯ ಮೈಸೂರಿನ ಪಂಡಿತರ ವಾದ 'ಕರ್ಣಾಟಕ' ಎಂದು. ಉತ್ತರದ ಜಿಲ್ಲೆಗಳವರ ಹಟ 'ಕರ್ನಾಟಕ'! ಯಾವುದು ಸರಿ? ಬ್ರಹ್ಮನೇ ಬಲ್ಲ, ಕೊನೆಗೆ ಖಾಜಿ ನ್ಯಾಯ ಆಯಿತು, 'ಣ-ನ' ಎರಡೂ ಬೇಡ. ಕನ್ನಡ ಸಾಹಿತ್ಯ ಪರಿಷತ್ತು ಎಂದೇ ಇರಲಿ ಎಂದು. ಆ ಘಟನೆಯೇ ಈ ಕ್ಷುದ್ರ ಕಾವ್ಯಕ್ಕೆ ಸ್ಫೂರ್ತಿ. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ-ಈ ಎಲ್ಲ ಷಟ್ಪದಿಗಳಲ್ಲೂ ಕಾವ್ಯದ ಕಸರತ್ತು ನಡೆಯುತ್ತದೆ.

ಕವಿಗೆ ಟೀಕಾಕಾರರ ಬಗ್ಗೆ ಎಳ್ಳಷ್ಟೂ ಹೆದರಿಕೆ ಇಲ್ಲ.

ಓದುವವರೋದುವರು, ಸಹಿಸದೆ ಸೀದು ಸಿಡಿಮಿಡಿಗೊಂಡು ನಡುವಣ,

ಬೀದಿಯಲಿ ಬೈದಿಡುವವರು ಬೈದಾಡುವರು ಬಿಡೆಲಾ।

'ಕರ್ಣ್ನಾಟಕದವರು' ಎಂಥ ಉದಾರರು, ಆಹಾ-ಕರ್ಣನಿಗೂ ಮಿಗಿಲು!

ಕರೆದು ತಣಿಯರು, ಕೊಟ್ಟು ತಣಿಯರು, ಸುರಿದು ಸೂರೆಯನ್ನಿಟ್ಟು ತಣಿಯರು,

ಹರಿದು ತಮ್ಮದ ಹಂಚಿ ತಣಿಯರು ನಾಡನಿತರರಿಗೆ!

ಮರೆದು ತಣಿಯರು ನುಡಿಯ ತಮ್ಮದ, ಮೊರೆದು ತಣಿಯರು ನುಡಿಯ

ಪರರದ ನರೆದು ತಣಿಯರು ತಮ್ಮ ಜೀವರ ಪೆರರ ಬೆಳಿಗಾಗಿ!

ಈ ಗುಣ ಇಂದು ಇನ್ನೂ ಅಮೋಘವಾಗಿ ವರ್ಧಿಸಿದೆ ಅಲ್ಲವೇ?

'ಣ' ವರ್ಣದ ಜಯಕಾರವೇ ಈ ಕಾವ್ಯಕ್ಕೆ ಭರತವಾಕ್ಯ.

ಇಲ್ಲಿ ಪ್ರಯೋಗವಾಗಿರುವ ಅಲಂಕಾರಗಳ ಹೆಸರು ಹೇಳಿದರೆ ಸಾಕು ನಮಗೆ ಎದೆ ಗುಂಡಿಗೆ ನಿಂತುಹೋಗುತ್ತದೆ.

ಈ ಪುಸ್ತಕದಲ್ಲಿ ಇನ್ನೂ ಕಾವ್ಯ ಖಂಡಗಳಿವೆ. ಅಭಿನವ ಭೈರಿಗೇಂದ್ರ ಭಯಾನಕವು, ಪಂಚಮದ (ಸಂಪಾದಕಪಂಚಕ) ಪರಮ ನವೀನ ಸ್ವಾಗತಗೀತೆ, ಪ್ರಶಂಸಾ ಪದ್ಯಮಾಲಿಕೆ, ಶಾಸನ ಪದ್ಯವಲ್ಲರಿ, ಪುರುಷಸರಸ್ವತಿ ಪ್ರಶಸ್ತಿ ಇತ್ಯಾದಿ. ಕಾವ್ಯಗಳ ಕೊರೆತ ಸಾಲದ್ದು ಎಂಬಂತೆ ಗದ್ಯಭಾಗಗಳ ಗಡಾರಿ ಏಟುಗಳು ಬೇರೆ! ನಿಂಗನ ಸಂಗೀತಾನುಭವ ನಿಮಗೂ ಬೇಕು ಎನಿಸಿದರೆ ಜಿ.ಪಿ. ರಾಜರತ್ನಂ ಅವರ ಪುರುಷ ಸರಸ್ವತಿ ಓದುವ ಪಾಪ ಮಾಡಿ. ಇಲ್ಲಿಗೇ ಸಾಕು ಬೋರ್ ಆಯಿತು ಎಂದರೆ, ಈ ಗಣಪತಿ ಸ್ತುತಿ ಹಾಡಿ. ಪೇಟಿ ತಿದಿ ಮುಚ್ಚಿ.

ಕಳ್ಟು (Cult) ಕಾವ್ಯದ ಮಸಿಯ ಕುಡಿಕೆಯ

ಟಿಳ್ಟು (Tilt) ಮಾಡುವ ಮೊದಲು ಹಾವಿನ

ಬೆಳ್ಟು (Belt) ಹಾಕಿದ ಗಣಪನನು ಹಾಡುವುದು ನಮ್ಮವರ

ಫಾಳ್ಟು (Fault) ಮೀರಿದರಿದನು ಸಿವಿಯರ್ (Severe)

ಜೋಳ್ಟು (Jolt) ತಪ್ಪದು ಸತ್ಯ ಥಂಡರ್

ಬೋಳ್ಟು (Thunder bolt) ಬಿದ್ದಂತೆಂದು ದೇರ್ಫೋರ್ (Therefore) ಗಣಪತಿಯ ನೆನೆವೆ!

ಮೊದಲೇ ನೆನೆಸಿಕೊಳ್ಳಬೇಕಾಗಿತ್ತು. ಥ್ಯಾಂಕ್‌ಗಾಡ್, ಕೊನೇಲಾದರೂ ಹೊಳೆಯಿತಲ್ಲ, Better late than never!

ಜೈ ಪುರುಷ ಸರಸ್ವತಿ ಮಹಾಕ್ಷುದ್ರ ಕವಿರಾಜ ಕಂಠೀರವ!

ಜೈ ರಾಜರತ್ನಂ ಗುರು ವರೇಣ್ಯಾ!

ಜೈ ಜೈ ಜೈ

**ಥಳುಕು - ತುಣುಕು**

''ಒಂದು ವೀಸೆ ಬೆಣ್ಣೆ ಕೊಡಯ್ಯಾ'' ಎಂದು ಮೈಸೂರು ರುಮಾಲು ಕಟ್ಟಿದವರು ಹುಬ್ಬಳ್ಳಿಯ ಅಂಗಡಿಯವನನ್ನು ಕೇಳಿದ.

''ಹಚ್ಚೋ ಬೆಣ್ಣೆ ಬೇಕೊ, ಉಣ್ಣೋ ಬೆಣ್ಣೇನೊ''
ಎಂದು ಅಂಗಡಿಯವ ಕೇಳಿದ.

# ಯಾಕೀಕರಣ

– ಶೀನೂ

ವಾಚಕ ಮಹಾಶಯರೇ, ಕಳೆದ ರಾಜ್ಯೋತ್ಸವದ ನೆನಪು ಇನ್ನೂ ಹಸಿರಾಗಿರುವ ಈ ಸಂದರ್ಭದಲ್ಲಿ ಯಾಕೀಕರಣ = ಯಾಕೆ+ಈ+ಏಕೀಕರಣ ಎಂಬ 'ಎ' ಕಾರ ಲೋಪ ಸಂಧಿಯ ಈ ಕತೆ ಅಪ್ರಸ್ತುತವಾಗಲಾರದು ತಾನೆ?

ಹಾಗಾದರೆ ಕೇಳಿ.

★ ★ ★

''ಯಿಸ್ನೂ ಬರ್‍ತಾನೆ ಅಂತಿದ್ರೂSSS...''

''ಯಿಸ್ನೂನೂ ಇಲ್ಲಾSSS... ಅನಂಥನೂ ಇಲ್ಲಾSS ಅವರಿಗೇನು ತಲೆ ಕೆಟ್ಟೈತಾ ಬೋಯಿಪಾಳ್ಯದ ರಾಜ್ಜಾಸ್ತವಕ್ಕೆ ಬರಾಕೆ?''

ಈ ವರ್ಷದ ರಾಜ್ಯೋತ್ಸವಕ್ಕೆ ಯಾವದೂ ಆಮಂತ್ರಣವಿಲ್ಲದೇ ತಳಮಳಿಸ್ತಾ ಇದ್ದೆ. ಮನೆಯಲ್ಲಿ ಹೆಂಡತಿ ಬೇರೆ ''ಅಲ್ರೀ... ವರ್ಷಾ ಇಷ್ಟೊತ್ತಿಗೆ ಒಂದಾದರೂ ರಾಜ್ಯೋತ್ಸವಕ್ಕೆ ಕರೆದು ಒಂದು ಗಂಧದ ಚಕ್ಕೀ ಹಾರಾ ಹಾಕಿ ಕಳಸತಿದ್ದರು... ಮನ್ಯಾಗ ತಂದು ಘೂಟಕ್ಕ ಹಾಕಿದರ ನಾಕ ದಿನ ಮಸ್ಕಿಟೋ ಆರ ಹೋಗತ್ತಿದ್ದವು. ಅಂಥಾದು ಈ ವರ್ಷ ನವ್ಹಂಬರ ಮುಗೀಲಿಕ್ಕೆ ಬಂದರೂ ನಿಮ್ಮನ್ನ ಮೂಸಿ ನೋಡಲಿಕ್ಕೆ ಸಹಿತ ಯಾರೂ ಬಂದಿರಲಿಲ್ಲರೀ... ಅದೆಂಥಾ ದರಿದ್ರ ಸಾಹಿತೀ ರೀ ನೀವು...'' ಎಂದು ತಿವಿಲಿಕ್ಕೆ ಹತ್ತಿದ್ದಳು.

ಯೋಗಾಯೋಗವೇನೋ ಎಂಬಂತೆ ಅವತ್ತೇ ನಮ್ಮ ಮನಿಗೆ ಹಾಲು ಹಾಕೋ ನಾಗರಾಜ ಬಂದು, ಅವರು ವಾಸಿಸೋ ಬೋಯಿ ಪಾಳ್ಯದ ಥರುಣ ಕರ್ನಾಟಕ ಸಂಗದವರು ನವ್ಹಂಬರ ಮೂವತ್ತರ ಬೆಳಿಗ್ಗೆ ಒಂಭತ್ತು ಗಂಟೆಗೆ ಅದ್ದೂರಿಯಾಗಿ ಆಚರಿಸಲಿರುವ ರಾಜ್ಜಾಸ್ತವಕ್ಕೆ ಮುಕ್ಯ ಅಥಿತಿಯಾಗಿ ಬರಲಿಕ್ಕೆ ಕೇಳಿ ಒಪ್ಪಿಸಿಕೊಂಡು ಹೋಗಿದ್ದ.

ನಾನು ಎಂದಿನ ನಾಟಕದೊಂದಿಗೇ ಒಪ್ಪಿಕೊಂಡಿದ್ದೆ. ಎಂದರೆ, ನಾಗರಾಜನೆದುರು ಡೈರಿ ತೆಗೆದು ಪುಟ ತಿರುವಿ ಹುಬ್ಬುಗಂಟಿಕ್ಕಿ ''ನವ್ಹಂಬರ ಮೂವತ್ತೂSS... ಅಂದರ ತರ್ಟಿಯೆತ್ ಇರು ನೋಡತೀನಿ...'' ಎಂದು ಅನುಮಾನಿಸಿ ಇನ್ನೊಂದು ಪುಟ ತಿರುವಿ ''ಇಪ್ಪತ್ತೆಂಟಕ್ಕೆ ದೆಹಲಿಗೆ ಹೋಗಿರತೇನಿ... ಇಪ್ಪತ್ತೊಂಭತ್ತರ ಸಂಜೆ ಫ್ಲಾಯಿಟಿಗೆ ಬಂದು... ಅವತ್ತೇ ಸಂಜೆ ಗವ್ಹರ್ನರ ಜತೆ ಒಂದು ಮೀಟಿಂಗ ಇದೆ... ರಾತ್ರಿ ಚೀಫ್ ಮಿನಿಸ್ಟರ ಜತೆ

ಡಿನ್ನರ....'' ಇತ್ಯಾದಿ ಎಂದಿನ ಸುಳ್ಳುಗಳನ್ನೆ ಹೇಳಿ ಆಮೇಲೆ ''ಓ... ಯೂ ಆರ್ ಲಕೀ.... ನವ್ಹಂಬರ ಮೂವತ್ತರ ಬೆಳಿಗ್ಗೆ ಫ್ರೀ ಇದ್ದೇನೆ... ಯೂ ಆರ್ ಲಕಿ'' ಎಂದು ಒಪ್ಪಿಕೊಂಡಿದ್ದೆ.

ಈಗಿನ ದಿನಗಳಲ್ಲಿ ದೆಹಲಿಗೆ ಹೋಗದಿದ್ದರ,.... ಗವ್ಹರ್ನರ ಸಂಗತಿ ಮೀಟಂಗ್ ಇರದಿದ್ದರ... ಚೀಫನ ಸಂಗಡ ಡಿನ್ನರಿಗೆ ಹೋಗದಿದ್ದರ, ಅವನೆಂತಹ ದರಿದ್ರದ ಸಾಹಿತಿ?

ಇರಲಿ ಅಂತೂ ಬೋವಿ ಪಾಳ್ಯದ ರಾಜ್ಯೋತ್ಸವಕ್ಕೆ ಅವರು ಕರೆಯಲಿಕ್ಕೆ ಬರುವದು ಬೇಡವೆಂದು ಹೇಳಿ ನಾನೇ ನವ್ಹಂಬರ ಮೂವತ್ತರ ಬೆಳಿಗ್ಗೆ ಒಂಭತ್ತು ಗಂಟೆಗೆ ಸರಿಯಾಗಿ ಹೋಗಿ ಹಾಲಿನ ನಾಗರಾಜ ಹೇಳಿದಂತೆ, ಸಂಕರ ದರ್ಶನಿ ಹತ್ತಿರ ಎಳೆ ಬಿಸಿಲಿಗೆ ಮೈಯೊಡ್ಡಿ ನಿಂತಿದ್ದೆ. ಬಿಸಿಲು ಮೋಹಕವಾಗಿತ್ತು.

ಬೋವಿಪಾಳ್ಯ, ಕನಕಪುರ ರಸ್ತೇದ ಮೇಲೆ 'ಬನಶಂಕರಿ' ದೇವಸ್ಥಾನ ದಾಟಿ ಕೋಣನ ಕುಂಟೆ ಹತ್ತಿರ ಗೊಲ್ಲರಹಟ್ಟಿ ಬಳಿ ದರ್ಮರಾಯನ ಸತ್ತಿರದ ಹತ್ತಿರದ ಹೈವೇಗೆ ತಾಗಿದ ಬಡಾವಣೆ. ಶಂಕರ ದರ್ಶನಿ ಹೈವೇದ ಮೇಲಿನ ಮೂಲೆ ಕಟ್ಟಡ. ಕಟ್ಟಡದ ಆಚೆ ಗೋಡೆಯ ಮೇಲೆ.

''ಅಕಿಲ ಭೋವಿ ಪಾಳ್ಯದ ಥರುಣ ಕರ್ನಾಟಕ ಸಂಗ'' ಎಂದು ಬರೆದಿದೆ. ಹಾಗಾಗಿ ಹುಡುಕುವದು ಕಷ್ಟವಾಗಲಿಲ್ಲ.

ನವ್ಹಂಬರದ ಚಳಿ ಬಿಸಿಲು ಬೆಳೀಲಿಕ್ಕೆ ಹತ್ತಿತ್ತು. ಹೈವೇದ ಮೇಲೆ ನಿರಂತರ ವಾಹನ ಸಂಚಾರ ನಡೆದಿತ್ತು. ಫ್ಯಾಕ್ಟರಿಗಳಿಗೆ, ಕಛೇರಿಗಳಿಗೆ ಹೋಗುವವರು ಇತ್ತಿಂದಿತ್ತ ಅತ್ತಿಂದಿತ್ತ ಭರ್ ಭರ್ರೆಂದು ಓಡತಾ ಇದ್ದರು. ಮಕ್ಕಳು ಸ್ಕೂಲಿಗೆ ಎಳೆದುಕೊಂಡು ನಡೆದಿದ್ದವು. ಕೈಗಾಡಿಯವರು ಕಂಠಶೋಷಣೆ ಮಾಡುತ್ತ ಗಾಡಿ ತಳ್ಳತೊಡಗಿದ್ದರು. ಬೆಂಗಳೂರಿನ ದೂರಿನ ಬಡಾವಣೆ ಬೋವಿಪಾಳ್ಯ ಕೂಡ ಆಗಲೇ ಎಚ್ಚೆತ್ತು ಮೈಮುರಿದಿತ್ತು. ಎಲ್ಲ ಸರಿ, ಆದರೆ ನಮ್ಮ ರಾಜ್ಯೋತ್ಸವದ್ದು ಮಾತ್ರ ಸುಳಿವೇ ಇರಲಿಲ್ಲ. ನಾಗರಾಜ ಬಂದಿರಲಿಲ್ಲ. ಒಂದಿಬ್ಬರು ಎಳೇ ತರುಣರು 'ಸಂಕರ ದರ್ಸನಿ'ಯ ಗೋಡೆಗೆ ಧ್ವನಿವರ್ಧಕ ಅಳವಡಿಸುತ್ತಿದ್ದರು. ಗೋಡೆಯ ಬಳಿ ನೆರಳಿಗೆ ಒಂದು ಟೇಬಲ್ ಇಟ್ಟು ಹಾಸು ಹಾಸತಾ ಇದ್ದರು. ಬಹುಶಃ ತಯಾರಿ ನಡೆದಿದೆ ಎಂದುಕೊಂಡು ದರ್ಶನಿಯ ಒಳಗೆ ಹೊಕ್ಕು ನಾಗರಾಜನಿಗಾಗಿ ಕಾಯುತ್ತ ನಿಂತೆ.

ದರ್ಶನಿ ಒಳಗೆ ಒಂದಿಬ್ಬರು ಮಣ್ಣಿನ ಮಕ್ಕಳು ತಟ್ಟೆಯುಲ್ಲಿನ ಸಾಂಬಾರದೊಳಗಣ ಇಡ್ಲಿಯನ್ನು ಚಮಚದಿಂದ ಚುಚ್ಚಿ ಚುಚ್ಚಿ, ತಿವಿದು ತಿವಿದು ಸೇಡು ತೀರಿಸಿಕೊಳ್ಳುತ್ತಿದ್ದರು. ಆಮೇಲೆ ಆ ಇಡ್ಲಿಯ ಮೃತ ಅವಶೇಷಗಳನ್ನು

ಅದೇ ಚಮಚೆಯಲ್ಲಿ ತುಂಬಿ, ಎತ್ತಿ 'ಆ' ಎಂದು ತೆರೆದ ಬಾಯಬಳಿ ತಂದು ಆ ಷಡ್ರಸೋಪೇತವಾದ ಚಮಚವನ್ನು ಬುಡಮೇಲು ಮಾಡಿಕೊಳ್ಳುವಲ್ಲಿ ಸಫಲರಾಗುತ್ತಿದ್ದರು.

ಇತ್ತ, ಒಬ್ಬ ನಡು ಹರೆಯದ ಗೌಡಮುಖೀ ಕಂಟ್ರಾಕ್ಟರ, ಒಂದು ಹೊಚ್ಚ ಹೊಸ ಮಿರಿ ಮಿರಿ ಹೊಳೆಯುವ ರಾಕ್ಷಸೀ ದ್ವಿಚಕ್ರದ ಮೇಲೆ 'ಧಡ ಧಡ ಧಡ' ಎಂದು ಎದೆ ನಡುಗಿಸುವ ಹಂಗ ಸಪ್ಪಳ ಮಾಡಿಕೋತ ಬಂದು, ದರ್ಶನಿಹತ್ತಿರ ಗಕ್ಕಂತ ನಿಲ್ಲಿಸಿ ನೆಲೆಕ್ಕ ಕಾಲೂರಿ ನಿಂತು, ಸೊಂಟದಿಂದ ಒಂದು ಸೆಲ್ಯೂಲರ್ ಸೆಳೆದು ಆಢ್ಯತೆಯಿಂದ ಕಿವಿ ಬಳಿ ಹಿಡಿದು ಅದರಲ್ಲಿ ''ಜಲ್ಲಿ... ಸಿಮೆಂಟು... ಹೊಯ್ಗೆ... ಹೆಣ್ಣಾಳು'' ಅಂತ ಏನೇನೋ ಮಾತನಾಡಿ ಅಕ್ಕ ಪಕ್ಕದವರೆಲ್ಲ ತನ್ನ ಸೆಲ್ಯೂಲರ್ ಸಂಭಾಷಣೆಯನ್ನು ನೋಡಿದ್ದಾರೆಂದು ಖಾತ್ರಿ ಮಾಡಿಕೊಂಡು, ಸೆಲ್ಯೂಲರನ್ನು ಸೊಂಟಕ್ಕೆ ಕುಕ್ಕಿ ಎದೆಯ ಮೇಲಿನ ಜೇಬಿನಿಂದ ಒಂದು ಚಿಕ್ಕ ಪ್ಲಾಸ್ಟಿಕ್ ಹಣಿಗೆ ತೆಗೆದು ಮೊದಲು ತಲೆ ಬಾಚಿಕೊಂಡು, ನಂತರ ಗಡ್ಡ ಮೀಶೆಗಳನ್ನು ನೀವಿಕೊಂಡು, ಆಮೇಲೆ ಅದೇ ಬಾಚಣಿಗೆಯಿಂದ ಪರಪರನೇ ಬೆನ್ನು ಕೆರೆದುಕೊಂಡು ಬಾಚಣಿಗೆಯನ್ನು ಜೇಬಿಗೆ ಸೇರಿಸಿ, ಒಂದು ಸಿಗರೇಟು ಹಚ್ಚಿ ತೃಪ್ತಿಯ 'ದಂ' ಎಳೆಯುತ್ತಾ ನಿಂತ. ಕೆಲ ಸಮಯಾದ ನಂತರ ಇತ್ತ ಒಬ್ಬಳು ಕುಟ್ಟಿ ಕುಟ್ಟಿ ಮಾಡಿದಂತಹ ನೀಳಕಾಯಾದ ಗಟ್ಟಿ ಚಲುವೆ, ಬಗಲಲ್ಲಿ ಚರ್ಮದ ಚೀಲ ನೇತಾಡಿಸುತ್ತ ಬಂದು, ಅದರಿಂದ ಕಪ್ಪು ಕನ್ನಡಕ ತೆಗೆದು ಕಣ್ಣಿಗೇರಿಸಿ, ಆ ಗೌಡಮುಖೀ ಕಂಟ್ರಾಕ್ಟರನ ಹಿಂದೆ ಏರಿ ಅವನ ಸೊಂಟ ತಬ್ಬಿ ಕೂತಳು. ಕೂಡಲೇ ರಾಕ್ಷಸೀ ದ್ವಿಚಕ್ರ ಇನ್ನೊಮ್ಮೆ ಧಡಧಡಧಡ ಎನ್ನುತ್ತ ಎದೆನಡುಗಿಸುತ್ತ ಹಾರಿ ಹೋಯಿತು. ಸೆಲ್ಯೂಲರ್ ಸಂಭಾಷಣೆಯನ್ನು ಯಾರಾದರೂ ನೋಡಿದ್ದರೋ ಇಲ್ಲವೋ, ಆದರೆ ಈ 'ಪೃಥ್ವಿರಾಜ-ಸಂಯುಕ್ತಾ' ಪೋಜನ್ನು ಮಾತ್ರ ಬೋವಿಪಾಳ್ಯದ ಸಕಲ ಪ್ರಜೆಗಳೂ ನೋಡಿ, ಹೊಟ್ಟೆಕಿಚ್ಚು ಪಟ್ಟುಕೊಂಡು ಮುಖ ಕಿವಿಚಿದರು.

ಇತ್ತಲಾಗ ಇಷ್ಟೊತ್ತಾದರೂ ನಮ್ಮ ರಾಜ್ಯೋತ್ಸವದ ನಾಗರಾಜನ ಪತ್ತೆಯೇ ಇರಲಿಲ್ಲ. ಸಮಯ ಆಗಲೇ ಹತ್ತು ದಾಟಿತ್ತು. ಮತ್ತೆ ನಾನು ಧ್ವನಿವರ್ಧಕ ಅಳವಡಿಸುತ್ತಿದ್ದ ಟೇಬಲ್ ಸರಿಸುತ್ತಿದ್ದ ಆ ತರುಣರ ಸಂಭಾಷಣೆಗೆ ಕಿವಿಗೊಟ್ಟೆ.

''ಮತ್ತೆ ಯಿಸ್ನೂನೂ ಇಲ್ಲಾ ಅನಂಥನೂ ಬರಾಂಗಿಲ್ಲ, ಅಂಬರೀಸಂತೂ ದಿಲ್ಲ್ಯಾಗ ಕುಂತವನೇ... ಇದೆಂಥ ದರಿದ್ರ ರಾಜ್ಯಾತ್ಸವ ಕಣಲಾ.... ಯಾರಾದರೂ ಎಸ್ಟ್ರಾನಾದರೂ ಕರಸಬಾರದಾSSS...''

''ಏಯ್ ನಿನಗೇನು ಗ್ಯಾನ ಸರಿ ಆಯ್ತೇ?... ಬೋಯಿಪಾಳ್ಯಕ್ಕೆ ಹಂತವರೆಲ್ಲ ಯಾರಲಾ ಬರ್ತ್ತಾರೆ?

''ಮತ್ತಂಗಾರೆ ಯಾರ್ನಾದರೂ ಬಾಸಣಕ್ಕೆ ಕರೆದಿರಬೇಕಲ್ಲಾ ಸೆಕೆಟರಿ ನಾಗರಾಜಪ್ಪ?''

''ಯಾವನೋ ಒಬ್ಬ ಸಾಯಿತೀನ್ನ ಕರೆದವ್ನಂತೆ.''

''ಥೂ! ಇವ್ನ ಮನಿ ಹಾಳಾಗ... ಮತ್ತೆ ಯಿಸ್ನೂ ಬರ್ತಾನೇಂತ ಹೇಳ್ತಾ ಇದ್ದ ನಿನ್ನೀಗಂಟ''

''ಮತ್ತ ಹಂಗೆಲ್ಲ ಹೇಳದೀರ ದುಡ್ಡು ಯಾರ ಕೊಡವರಾ?''

''ಹೋಗಲಿ ಸಾಯಿತಿ ಅಂತೀಯಲ್ಲ... 'ಪುರಸೋತ್ತಮನ ಸಾಲಿಸಾ' ಬರೀತಿದ್ದನಲ್ಲಾ... ಅಂತವನಾ?''

''ಯೋ.. ಯಾ ಮಗನಿಗೆ ಗೊತ್ತಲಾ ಅದೆಲ್ಲಾ?... ಇವನೇನೋ ದಾರವಾಡದ ಸಾಹಿತಿ ಅಂತೆ. ನಮ್ಮ ಸೆಕ್ರೆಟರಿ ನಾಗರಾಜಪ್ಪ ಅದಾನಲ್ಲಽಽ... ಅವ ಇವರ ಮನಿಗೆ ವರ್ತನೀ ಆಲು ಆಕೋನಂತೆ... ಈ ವರ್ಸ ಬೇರೆ ಯಾರೂ ಸಿಕ್ಕಲಿಲ್ಲ ಅಂತ ಈ ವಯ್ಯನ್ನ ಎಳಕೊಂಡು ಬಂದವನಂತೆ, ಅವನೇ ಯೇಳ್ತಿದ್ದ.''

''ಗೊತ್ತಾಯಿತು ಬುಡು... ದಾರವಾಡ ಅಂದ್ರೆ ಬೇಂದ್ರೇನೇ ಇರಬೇಕು.''

''ನಿನ್ನ ಮಡ್ಡ ತಲೆಗಿಷ್ಟು... ಬೇಂದ್ರ ಸತ್ತು ಯಾಮಾತಾತು.... ದಾರವಾಡದವರಂದರ ಯಲ್ಲಾರೂ ಬೇಂದ್ರೆ ಅಂದ್ಕೊಂಡ್ಯಾ?''

''ನಾ ಅಲ್ಲ... ಅವರಽಽಹಂಗ ತಿಳಿದಿರತಾರೆ'' ಎಂದ ಮಡ್ಡ ತಲೆಯಾತ.

ಧಾರವಾಡಕ್ಕಾದ ಈ ಅಪಮಾನವ ಕಂಡು, ನನ್ನ ಹಾಸ್ಯಪ್ರಜ್ಞೆ ಹಾರಿಹೋಗಿ, ನೂರೊಂದು ಬಯ್ಗುಳ ತಾಳಿಕೊಂಡ ಶ್ರೀಕೃಷ್ಣನಂತೆ ಮುಖಮಾಡಿ ನಾನು ಆ ಶಿಶುಪಾಲರ ಬಳಿ ಸಾಗಿ ದರ್ಪದಲಿ,

''ಏನ್ರೆಪಾ... ನಾಗರಾಜ ಎಲ್ಲಿದ್ದಾನೆ.... ನಿಮ್ಮ ಥರುಣ ರಾಜ್ಯೋತ್ಸವ ಎಷ್ಟು ಗಂಟೆಗೆ ಸುರು ಆಗ್ರದೆ...?'' ಎಂದೆ.

ಆಗ ಆ ಮಡ್ಡ ತಲೆ ಶಿಶುಪಾಲ 'ಒಂಭತ್ತ ಗಂಟೇ ಅಂತ ಇನ್ನೀಟೇಶನ್ಯಾಗ ಬರದೈತಲ್ಲ...? ಅಂದಮ್ಯಾಗ ಹನ್ನೊಂದಕ್ಕೆ ಸ್ಟಾರ್ಟ್ ಮಾಡೇಮಾಡತಾರು - ಅದರಾಗ ಕೇಳುದೇನೈತರಾ?'' ಎಂದು ನನ್ನನ್ನೇ ತರಾಟೆಗೆ ತಗೊಂಡ.

ಆ ಇನ್ನೊಬ್ಬ ಶಿಶುಪಾಲ, ''ಏನ್ಸಾಮಿ ಆವಾಗಿನಿಂದ ನೋಡ್ತಾ ಅವ್ನಿ ನಾನೂ... ಬಂದಳಲೇ ಸೊಂಟದ ಮ್ಯಾಗ ಕೈಯಿಟಗೊಂಡು ಯಿಟ್ಟೋಬನ ತರಾ ನಿಂತು ನೋಡ್ತಾನೇ ಇದಿಯಾ... ಎಲ್ಡು ಕುರ್ಚಿ ಆಕಾಕೆ ಯಲ್ಪ ಮಾಡಿದ್ರೆ ನಿನ್ನ ಕೈ ಸೇದಿ ಹೋಯ್ತದಾ ಏನು? ಸಾರ್ಜಣಕ ಕೆಲಸ ಅಂದ್ರೆ ಯಲ್ಲಾರೂ

ಕೈಕೂಡಿಸಬೇಕಲ್ವೇ... ಇನ್ನೇನು ಚೀಪಗೆಸ್ತು ಬರೋ ಒತ್ತಾಯ್ತೋ ಏನೋ...''
ಎಂದು ದಬಾಯಿಸತೊಡಗಿದ.

ಈ ರೀತಿ ಶಿಶೂಪಾಲರಿಬ್ಬರೂ ಕೂಡಿ ಶ್ರೀ ಕೃಷ್ಣನ್ನ ರುಬ್ಬಿ ಚಟ್ನಿ ಮಾಡತಿರಬೇಕಾದರ, ನಾಗರಾಜ ಇನ್ನೊಬ್ಬರ ಜತೆ ಧಾವಿಸಿ ಓಡಿ ಓಡಿ ಬರುತ್ತ ''ಸ್ವಾ... ಸ್ವಾ...ಸ್ವಾರಿ ಸ್ವಾ... ಈಗ ಬಂದ್ರಾಸ್ವಾ... ಬನ್ನಿ ಸ್ವಾ... ಎಲ್ಲಾ ರೆಡಿ ಆಯ್ತೆ ಸಾ'' ಎಂದು ಆ ಇನ್ನೊಬ್ಬನ ಕಡೆ ಹೊರಳಿ ''ಸಾ ಇವರು ಹಿರೇಮಠ ಅಂತ ನಿಮ್ಮ ಕಡೆಯವರು ಸ್ವಾ... ಒಂದ್ನಿಮಿಷ, ಕಾರ್ಯಕ್ರಮ ಸ್ಟಾರ್ಟ್ ಮಾಡಿ ಬರ್ತೇನೆ ಸಾ'' ಎನ್ನುತ್ತ ಧ್ವನಿ ವರ್ಧಕದ ಕಡೆಗೆ ಓಡಿದ.

ಇತ್ತ ಹಿರೇಮಠ ನನ್ನ ಕಡೆ ಹೊರಳಿ

''ಸಾಹೇಬರ, ಯಾವೂರ್ರೀ ನಿಮ್ದು'' ಎಂದ.

''ಧಾರವಾಡ'' ಎಂದೆ ನಾನು. ಕೂಡಲೇ ಹಿರೇಮಠ ನೂರಾರು ವರುಷಗಳಿಂದ ಧಾರವಾಡದ ಇನ್ನೊಬ್ಬ ಪ್ರಾಣಿಯನ್ನು ನೋಡಿಯೇ ಇಲ್ಲವೇನೋ ಎಂಬಂತೆ ಆನಂದಾತಿರೇಕದಿಂದ; ''ಚೆ...ಚೆ...ಚೆ... ಹಂಗಾರ ನಮ್ಮೂರS ಆತಲ್ಲರೀ'' ಎಂದು ಮತ್ತೆ ''ಧಾರವಾಡದಾಗ ಯಲ್ಲೆರೀ'' ಎಂದ.

ನಾನು ''ಕಾಮನ ಕಟ್ಟಿ'' ಎನ್ನುತ್ತಲೂ ಹಿರೇಮಠ ಹರ್ಷವಾಯು ಬಡದವರಂತೆ ''ಬೇ... ಹೋಗ್ಗೋ ಇವನಾಪನSS ನಮ್ಮದೂ ಕಾಮನ ಕಟ್ಟೀನರೀ ಸಾಯೇಬರ, ಮಟ್ಟೀ ಪರಪ್ಪನ ಖೊಟಿನ್ಯಾಗ ನಮ್ಮ ಮನೀ...'' ಎನ್ನುತ್ತ ತುಂಬಿ ತುಳುಕುವ ಸಂತೋಷದ ಭರದಲ್ಲಿ ನನ್ನ ಎರಡೂ ಕೈಗಳನ್ನು ಗಟ್ಟಿಯಾಗಿ ಕುಲುಕುತ್ತ, ಅಪ್ಪಿಕೊಂಡು ಮುತ್ತು ಕೊಡಲಿಕ್ಕೇ ಬಂದ.

ಪುಣ್ಯಕ್ಕೆ ಅಷ್ಟರಲ್ಲಿಯೇ ನಾಗರಾಜ ಕಾರ್ಯಕ್ರಮ ಸ್ಟಾರ್ಟ್ ಮಾಡಿದ್ದನೆಂದು ಕಾಣುತ್ತದೆ. ಒಮ್ಮೆಲೇ ಧ್ವನಿವರ್ಧಕ ಪ್ರಚಂಡ ಶಕ್ತಿಯಿಂದ ''ನಾವಾಡುವ ನುಡಿಯೇ ಕನ್ನಡ ನುಡಿ...'' ಎಂದು ಕಿರುಚತೊಡಗಿದ್ದು ಇದ್ದಕ್ಕಿದ್ದಂತೆ ಗಕ್ಕ ಎಂದು ಸ್ತಬ್ಧವಾಯಿತು. ಆಮೇಲೆ ಧ್ವನಿವರ್ಧಕದೊಳಗೇ ಒಂದು ದನಿ ''ಇದೇನ್ರೋ ಅಳೀ ಆಡು ಆಕೀರಾ... ಒಂದ್ಯಾವದಾರಾ ಹೊಸಾದು ಕಿಕ್ ಕೊಡೋ ಅಂತಾದ ಆಕಬಾರದಾ'' ಎಂದ. ಕೂಡಲೇ ಧ್ವನಿವರ್ಧಕ ಪ್ರಚಂಡ ಆರ್ಕೆಸ್ಟ್ರಾ ಸದ್ದಿನೊಂದಿಗೆ ''ಓ...ಓ...ಓ... ನಾನು ಗಂಡೂ SSS....

ಎ...ಎ...ಎ... ನಾನು ಹೆಣ್ಣೂSSS....'' ಎಂಬ ಹೊಸಾ ಡುಯೆಟ್ಟನ್ನು ಒದ್ದು ಒದ್ದು ಕಿಕ್ಕ್ ಕೊಡತೊಡಗಿತು. ಜತೆಜತೆಗೇ ಧ್ವನಿವರ್ಧಕದಲ್ಲಿಯೇ ಇತರರ ಮಾತು ನಡೆ ಕೇಕೆಗಳೆಲ್ಲ ಒಮ್ಮೆಲೇ ಗಟ್ಟಿಯಾಗಿ ಪ್ರತಿಧ್ವನಿಸತೊಡಗಿದವು. ಮತ್ತೂ ಇದೆಲ್ಲ ನೋಡನೋಡುತ್ತಿರುವಂತೆಯೇ ನಿಮಿಷಾರ್ಧದಲ್ಲಿ ನಡೆಯಿತು.

ಈ ರೀತಿ ಅಂದು ಆಗಸ ಬುವಿ ಪಾತಾಳಗಳೆಂಬ ತ್ರಿಲೋಕಗಳಲ್ಲಿ ಬುದ್ಬುದಿಸುವ ಸೂಕ್ಷ್ಮಾತಿಸೂಕ್ಷ್ಮ ಧ್ವನಿ ತರಂಗಗಳನ್ನೂ ಕೂಡ ಆ ಮೈಕಾಸುರ ಅಗಸ್ತ್ಯನೋಪಾದಿಯಲ್ಲಿ ತನ್ನೊಳು ಹೀರಿಕೊಂಡು ತನ್ನ ಸ್ವಂತ ದೈತ್ಯ ಕಂಠತ್ರಾಣವ ಆ ಸೂಕ್ಷ್ಮಾತಿಸೂಕ್ಷ್ಮ ಸ್ವರದಲೆಗಳಿಗೆ ಬೆರೆಸಿ, ಅವುಗಳ ಕಾರ್ಕಸ್ಯವನ್ನು ಇರ್ಮಡಿ ನೂರ್ಮಡಿಯಾಗಿಸಿ ಆವುದೋ ಅಸುರೀ ಬಲದಿಂದ ಆ ಆಲೆಗಳನ್ ಅಂದಿನ ಆ ಬುವಿಪಾಳ್ಯದ ನಭೋಮಂಡಲದಲ್ಲಿ ತೂರಿ ತುಂಬಿ ಮೊಗೆ ಮೊಗೆದು ಆ ಶಬ್ದಬ್ರಹ್ಮನಿಗರ್ಪಿಸುತಿರ್ದನ್

ಇತ್ತ ಆ ಬೋವಿ ವಿಶ್ವದ ಸಮಸ್ತ ಜೀವ ಜಂತುಗಳು ತಮ್ಮ ಸಕಲೇಂದ್ರಿಯಗಳ ಚೇತನವನ್ನೂ ಧಾರಣ ಶಕ್ತಿಯನ್ನೂ ಕರ್ಣೇಂದ್ರಿಯವೊಂದಕ್ಕೇ ಟ್ರಾನ್ಸಫರಿಸಿ ತಮ್ಮ ಪ್ರಾಣಂಗಳನ್ನೆಲ್ಲ ಕರ್ಣೇಂದ್ರಿಯದೊಳ್ ಕೇಂದ್ರೀಕರಿಸಿ ಸಾಯುತಿರ್ದರ್

(ಇನ್ನ ಹೀಂಗS ಬರೀತಾ ಹೋದರೆ ಕುವೆಂಪು ಎದ್ದು ಬಂದು ಒದೀತಾರೆ!)

ಒಟ್ಟSS ಏನಾತಪಾ ಅಂದ್ರ ಯಲ್ಲಾ ಹೊಲಸೆದ್ದು ಹೋತು. ಸಂಕರ ದರ್ಸನಿಯ ಸುತ್ತ ಮುತ್ತಲಿನ ಶಾಂತವಾತಾವರಣ ಅಲ್ಲೋಲಕಲ್ಲೋಲವಾಗಿತ್ತು. ಅರ್ಧಕ್ಕರ್ಧ ಹೈವೇದ ತುಂಬ ಸ್ಕೂಲ ಮಕ್ಕಳು ಕೂತು ಗಲಾಟೆ ಮಾಡತಿದ್ದರು. ಯಾವದೋ ಮಾಯೆಯಿಂದೆಂಬಂತೆ ಕಾರ್ಯಕ್ರಮ ಶುರುವಾಗಿಬಿಟ್ಟಿತ್ತು. ನಾನು ನಾಗರಾಜ ಇಬ್ಬರೂ ಹಾಸು ಹಾಸಿದ ಮೇಜಿನ ಹಿಂದೆ ಕೂತಿದ್ದೆವು. ನಮ್ಮ ಮುಂದಿನ ನಾಲ್ಕಾರು ಕಬ್ಬಿಣ ಕುರ್ಚಿಗಳಲ್ಲಿ ಹಿರೇಮಠ ಹಾಗೂ ಇಬ್ಬರೂ ಶಿಶುಪಾಲರೂನ ಇನ್ನೊಂದಿಬ್ಬರು ಯಾರೋ ಕೂತಿದ್ದರು. ಆ ಇನ್ನೊಂದಿಬ್ಬರಲ್ಲಿ ಒಬ್ಬ ಗಡ್ಡಧಾರಿ ಆಯ್.ಎಸ್.ಆಯ್. ಏಜೆಂಟನಂತೆ ಕಾಣುತ್ತಿದ್ದ. ಒಬ್ಬಾಕಿ ದನ ಮೇಯಿಸುವ ಮುದುಕಿ ಪೆಂಡಾಲದ ಒಳಗೇ ಎರಡು ಯಮ್ಮೀ ಕೂಡಿಸಿಕೊಂಡು ತಾನೂ ಕೂತಿದ್ದಳು. ಅಕ್ಕ ಪಕ್ಕದ ಅಂಗಡಿ ಮುಗ್ಗಟ್ಟುಗಳ ಜನ ತಮ್ಮ ತಮ್ಮ ಅಂಗಡಿ ಕಟ್ಟೆಯ ಮೇಲೆ ಹುಬ್ಬಿಗೆ ಕೈಯಿಟ್ಟು ನೋಡುತ್ತಿದ್ದರು. ಟ್ರಾಫಿಕ್ ಜಾಮ್ ಆಗಿ ಟ್ರಕ್ ಚಾಲಕರು ಕೋಪದಿಂದ ಹಾರ್ನ ಬಾರಿಸಲಾರಂಭಿಸಿದ್ದರು.

ಈ ಮಧ್ಯೆ ನಾಗರಾಜ ಭಾಷಣ ಪ್ರಾರಂಭಿಸಿದ್ದ. ವೀರಾವೇಶದಿಂದ ಮೇಜು ಕುಟ್ಟಿ ಕುಟ್ಟಿ ಕಂಠಶೋಷಣೆ ನಡೆಸಿದ್ದ. ಅವನ ಭಾಷಣದಲ್ಲಿ ಯಥಾಪ್ರಕಾರ ಪಂಪ...ರನ್ನ... ಕುಮಾರವ್ಯಾಸ... ಆಲೂರ... ಬಿ.ಎಂ.ಶ್ರೀ... ಬೇಂದ್ರೆ.. ಗೋಕಾಕ.. ಕುವೆಂಪು ಯಲ್ಲಾರೂ ಬಂದಹೋದರು. ಪುಣ್ಯಕ್ಕೆ ''ಕಾವೇರಿಯಿಂದ ಗೋದಾವರಿವರಮಿರ್ದ'' ಅದನ್ನೂ ಅವನೇ ಹೇಳಿಬಿಟ್ಟ. ಅವ ಹೇಳಿದ್ದಿಲ್ಲ ಅಂದರ ನನಗ ಹೇಳಬೆಕಾಗತ್ತಿತ್ತು. ಆದರ ಈ ''ಕಾವೇರಿಯಿಂದ ಗೋದಾವರಿವರಮಿರ್ದ'' ಇದರೊಳಗ ಯಲ್ಲೋ ಒಂದು ಕಡೆ 'ಮಾ'

ಬರುತ್ತದ. ಯಲ್ಲ್ಯಂತ ಗೊತ್ತಿಲ್ಲ. ಹಿಂಗಾಗಿ ಅದನ್ನೂ ನಾಗರಾಜನೇ ಹೇಳಿಬಿಟ್ಟಿದ್ದ ಒಳ್ಳೆಯದೇ ಆಯಿತೆಂದೆ. ನಾಗರಾಜನ ಭಾಷಣ ಅವ್ಯಾಹತವಾಗಿ ನಡೆದೇ ಇತ್ತು. ನಡುನಡುವೆ ಧ್ವನಿವರ್ಧಕದಲ್ಲಿ ಯಾರೋ ಗಟ್ಟಿಯಾಗಿ ''ಮಸ್ಸಾಲೇಽಽ... ಬೈಟೂ ಕಾಪಿ...'' ಅಂತ ಒದರಿದ್ದು ಕೇಳಸತಿತ್ತು. ನಾಗರಾಜ ತನ್ನ ಭಾಷಣದ ನಡುವೆಯೇ ಶಿಶುಪಾಲರನ್ನುದ್ದೇಶಿಸಿ ''ಲೇ ಆ ಸ್ಕೂಲ ಹೈಕಳಿಗೆ ಈಗಲೇ ಕಳ್ಳೆಪುರಿ ಕೊಡಬ್ಯಾಡ್ರಿ... ಆ ಮ್ಯಾಗ ಸಾಹೇಬರ ಭಾಷಣಕ್ಕೆ ಯಾರೂ ಇಲ್ಲದಂಗಾದೋತು'' ಎಂದದ್ದೂ ಕೇಳಿಸಿತು. ಆಮೇಲೆ ನಾಗರಾಜ ಭಾಷಣ ಮುಂದೊರೆಸಿ ''ಬೆಳಗಾವಿ - ಕಾಸರಗೋಡಿಗೋಸ್ಕರ ರಕ್ತದ ಕೊನೆಯ ಹನಿ ಇರುವ ವರೆಗೆ ಹೋರಾಡು''ವೆನೆಂದ. ಮತ್ತೂ ''ಕೊಡಗೂ ಹಾಗೂ ಉತ್ತರ ಕರ್ನಾಟಕದಲ್ಲಿ ಪ್ರತ್ಯೇಕ ರಾಜ್ಯದ ಧ್ವನಿ ಎಬ್ಬಿಸಿದವರನ್ನು ''ಉಟ್ಲಿಲ್ಲಾ'' ಅನ್ನಿಸಿಬಿಡತೀನಿ'' ಅಂದ. ನನಗ್ಯಾಕೋ ಸುಮ್ಮಸುಮ್ಮನೇ ಕಾರಣ ಇಲ್ಲದs ನಡುಕ ಸುರು ಆತು.

ಆಮೇಲೆ ನಾಗರಾಜನ ಆವೇಶಪೂರಿತ ಭಾಷಣ ಕೇಳಿ ಸ್ಫೂರ್ತಿಗೊಂಡು ನಾನೂ ನನ್ನ ಭಾಷಣದಲ್ಲಿ ಅಷ್ಟೇ ರೋಷಾವೇಶದಿಂದ ''ಬೆಳಗಾವಿ, ಕಾಸರಗೋಡುಗಳ ಜತೆಗೇ ಬೆಂಗಳೂರಿಗೋಸ್ಕರ ಕೂಡ ರಕ್ತದ ಕಾಲುವೆ ಹರಿಸುವೆ''ನೆಂದೆ

ಅಂತೂ ಕೊನೆಗೆ ಶಿಶುಪಾಲನೊಬ್ಬ ಬಂದು ಅರ್ಧಗಂಟೆ ವಂದನಾರ್ಪಣೆ ಕೊರೆದ ಮೇಲೆ ಸಭೆ ಮುಗಿಯಿತು. ಆಮೇಲೆ ಇನ್ನೊಬ್ಬ ಶಿಶುಪಾಲ ಬಂದು ಆವೇಶದಿಂದ 'ಕನ್ನಡ ತಾಯಿಗೆ - ಜಯವಾಗಲಿ' ಎಂದು ಮೂರುಸಲ ಕೂಗಿದ ಅದೇ ಪ್ರಕಾರ ಬಾರತಾಂಬೆಗೆ, ಬುವನೇಶ್ವರಿಗೆ ಕೂಡ ಮೂರು ಮೂರುಸಲ ಜಯವಾಯಿತು.

ಆಮೇಲೆ ''ಬೋಯಿ ಪಾಳ್ಯದ ಥರುಣ ಕರ್ನಾಟಕ ಸಂಗದ ಕಾರ್ಯದರ್ಶಿ ಕನ್ನಡದ ಕಟ್ಟಾಳು ನಾಗರಾಜ ಅವರಿಗೆ ಜಯವಾಗಲಿ ಆಯಿತು. ಇನ್ನೇನು ಸಬೆ ಮುಗಿಯಿತು ಎಂದು ಎಲ್ಲರೂ ಏಳುತ್ತಿದ್ದಾಗ, ವಂದನಾರ್ಪಣೆ ಮಾಡಿದ ಶಿಶುವಾಲ ಓಡಿಬಂದು ಮೈಕಿನಲ್ಲಿ ''ಅಯ್-ಒಂದೀಟ ನಿಂದರ್ರಿ'' ಎಂದು ನನಗೆ ''ಸ್ವಾ ತಮ್ಮ ಹೆಸರೇನು?'' ಎಂದ ನಾನು ಹೇಳಿದೆ. ಕೂಡಲೇ ಆಗಸ ಬಿರಿಯುವಂತೆ ''ಇವತ್ತಿನ ಮುಕ್ಯ ಅತಿಥಿಗಳಾದ ಶ್ರೀನಿವಾಸಮೂರ್ತಿಯವರಿಗೆ ಜಯವಾಗಲಿ'' ಎಂದ. ನನಗೂ ಮೂರು ಸಲ ಜಯವಾಯಿತು.

ಮರಳಿ ಬರುವಾಗ, ನಾಗರಾಜ, ಹಿರೇಮಠ, ಶಿಶುಪಾಲ ಮತ್ತು ಆಯ್.ಎಸ್.ಆಯ್. ಏಜಂಟ ಎಲ್ಲರೂ ಕೈಯಲ್ಲಿ ನನ್ನ ನೆನಪಿನ ಕಾಣಿಕೆ ಮತ್ತು

ಗಂಧದ ಚಕ್ಕಿ ಹಾರ ಹಿಡಿದುಕೊಂಡು ಬೀಳ್ಕೊಡಲು ಬಂದರು.

ನಾನು ಹಿರೇಮಠನಿಗೆ "ಯಲ್ಲಾ ಬರೋಬ್ಬರಿ ಆತು ಆದರೆ ಕಡೀಗ ನನ್ನ ಹೆಸರಿನ ಜಯಕಾರದಾಗ ನನ್ನ ಹೆಸರನ್ನು ಸರಿಯಾಗಿ ಶ್ರೀನಿವಾಸ ವೈದ್ಯ ಎಂದು ಹೇಳದೇ ಶ್ರೀನಿವಾಸ ಮೂರ್ತಿ" ಎಂದರಲ್ಲಾ ಎಂದು ಬೇಸರಿಸಿದೆ.

ಹಿರೇಮಠ ಕೂಡಲೇ "ಚೇ...ಚೇ... ನೀವೇನು ಬ್ಯಾಸರಾ ಮಾಡಿಕೋಬ್ಯಾಡರಿ ಸಾಹೇಬ್ರ... ಮುಂದಿನ ರಾಜ್ಯೋತ್ಸವಕ್ಕ ಸಮಾ ಮಾಡಿಕೋ ಅಂತ ಹೇಳತೇನರಿ" ಎಂದ. ಕೂಡಲೇ ಹಿಂದೆ "ಏನಣ್ಣೋ ಮುಂದಿನ ಸಲ ಕೂಡ ಈ ಮೂದೇವಿನ್ನೇ ಕರೀತಾರಾ" ಎಂದ ಯಾವನೋ ಒಬ್ಬ ಶಿಶುಪಾಲ.

# ಭಾಗವತದಲ್ಲೊಂದು ಜೂಟಾಟ

– ಬಿ.ಎಸ್. ಶೈಲಜಾ

ಗೋಪಿಯರ ವಸ್ತ್ರಗಳನ್ನು ಅಪಹರಿಸಿ ಭಗವಾನ್ ಶ್ರೀಕೃಷ್ಣ ಮರದ ಮೇಲೆ ಹತ್ತಿ ಕುಳಿತಿದ್ದು ಒಂದು 'ಲೀಲೆ' ಎನ್ನಿಸಿಕೊಂಡು ಭಾಗವತದ ಎಲ್ಲಾ ಅವತರಣಿಕೆಗಳಲ್ಲೂ ಸ್ಥಾನ ಪಡೆದಿದೆಯಲ್ಲವೇ? ಈ ಘಟನೆಯನ್ನು ಗಮನಿಸಿ ಓದಿ. ಕೃಷ್ಣನ ಉಪದೇಶ ಕೇಳಲೂ 'ಎಲ್ಲಾ' ಗೋಪಿಯರೂ ಬಂದರೇ ಎಂದು ಗಮನಿಸಿ. ನೀರಿನಿಂದಾಚೆಗೆ ಬರದೇ ಉಳಿದ 'ಅಲ್ಪಸಂಖ್ಯಾತ' ಗೋಪಿಯರ ಕುರಿತು ಪ್ರಸ್ತಾಪವೇ ಇಲ್ಲ ಅಲ್ಲವೇ? ಈ ಕುರಿತ ಒಂದು ಪ್ರಸಂಗ ಅದು ಹೇಗೋ ಎಲ್ಲ ಕವಿಗಳ 'ಕೈ' ತಪ್ಪಿಸಿಕೊಂಡಿದೆ. ಅದು ನಡೆದದ್ದು ಹೀಗೆ.

ಗೋಪಿಯರು ಕೃಷ್ಣನ ಉಪದೇಶ ಕೇಳಿ ತಂತಮ್ಮ ಸೀರೆಗಳನ್ನು ವಾಪಸ್ಸು ಪಡೆದರಷ್ಟೇ ಆಮೇಲೂ ಸಹ ಕೃಷ್ಣನ ಬಳಿ ಅರ್ಧ ಡಜನ್ ಸಿರೆಗಳು ಉಳಿದುಕೊಂಡವು. ಮುಂದೆ ದ್ರೌಪದಿಯ ಮೇಲೆ ಪ್ರಯೋಗಿಸಬೇಕಾಗಬಹುದೆಂದು ಅವನೇನೂ ಅಕ್ಷಯ ವಸ್ತ್ರ ಸೃಷ್ಟಿಯ ರಿಹರ್ಸಲ್ ಆರಂಭಿಸಿರಲಿಲ್ಲ. ಹಾಗಾದರೆ ಈ extra ಎಲ್ಲಿಂದ ಬಂತು ಎಂದಾತ ತಲೆ ಕೆರೆದುಕೊಂಡ. ಕೈಗೆ ನವಿಲುಗರಿ ಅಡ್ಡ ಸಿಕ್ಕಿದ ಹಾಗೆ ಕಣ್ಣಿಗೆ ಆರೇಳು (ಬತ್ತಲೆ) ಗೋಪಿಯರೂ ಸಿಕ್ಕಿಬಿದ್ದರು. ಉಪದೇಶ ಕೇಳದಿದ್ದರೇನಾಯ್ತು, ಹೋಗಲಿ ಪಾಪ, ಕೊಟ್ಟುಬಿಡೋಣ ಎಂದಾತ ಸೊಂಟಕ್ಕೆ ಕೊಳಲು ಸಿಕ್ಕಿಸಿ ಮರದಿಂದ ಧುಮುಕಿ, ಸೀರೆಗಳನ್ನು ಅವರತ್ತ ಚಾಚಿದ, ಅಷ್ಟೇ...

ನೀರಿನೊಳಗೇ ಧಡಧಡ ಎಂದು ಈಜಿಕೊಂಡು ಆ ಆರೂ ಜನ ''ದೌಡಾಯಿಸಿದರು'' ಕೃಷ್ಣ ದಂಡೆಯ ಮೇಲೇ ಹಿಂಬಾಲಿಸಿದ. ''ನಿಮ್ಮ ಸೀರೆ ತಗೊಳ್ಳಿ ನಂಗೇನೂ ಬೇಡ'' ಎಂದು ತನ್ನ unconditional ಘೋಷಣೆಯನ್ನು ಕೂಗಿಯೇ ಕೂಗಿದ. ಅವರು ಕೇಳಿಸಿಕೊಳ್ಳದೆ ಓಡಿದರು, ಅವರು ಮುಂದೆ, ಕೃಷ್ಣ ಹಿಂದೆ.

ಆಗ ಒಂದು ವಿಚಿತ್ರ ನಡೆಯಿತು. ಭೂಮಿಯ ಅಂಚು ಸಿಕ್ಕಿಬಿಟ್ಟಿತು. ''ದಬಕ್ಕೆಂ''ದು ಆರೂ ಜನ ದಿಗಂತ ಸೇರಿದರು; ಕೃಷ್ಣನೂ ಅಷ್ಟೇ....

ಎಷ್ಟೊಂದು ರೋಮಾಂಚಕಾರಿ ಕತೆಯಲ್ಲವೇ? ಆದರೆ ಇದು ಸೆನ್ಸಾರ್ ಏಕಾಯಿತು? ಈ ಪ್ರಶ್ನೆಗೆ ನೀವು ಹೇಳುವ ಉತ್ತರ ಏನೆಂದು ಸುಲಭವಾಗಿ ಊಹಿಸಬಹುದು. ''ನನಗೆ'' ಈ ಕತೆ ಹೇಗೆ ಗೊತ್ತಾಯಿತು ಅಂತ....




ಉತ್ತರ ಸುಲಭ. ತಲೆ ಎತ್ತಿ ನೋಡಿದ್ದರೆ ನಿಮಗೂ ಈ ಕತೆ ತಿಳಿಯುತ್ತಿತ್ತು. ಅಲ್ಲಿ ನೋಡಿ, ಆಕಾಶದಲ್ಲಿ - ಸೀರೆ ಚಾಚಿಹಿಡಿದು ಓಡುತ್ತಿರುವ ಕೃಷ್ಣ- ದೂರದಲ್ಲಿ ಗುಂಪು ಕಟ್ಟಿಕೊಂಡು ಓಡುತ್ತಿರುವ ಆರೇಳು ಗೋಪಿಯರು.

ಹ್ಞಾ! ತಲೆ ಎತ್ತಿ ನೋಡಿದಿರಲ್ಲವೇ? ಅಷ್ಟೇ ನನಗೂ ಬೇಕಾಗಿದ್ದುದು. ನಾಳೆಯೂ ನೋಡಿ, ನಾಡಿದ್ದೂ ನೋಡಿ, ಇವರ ಜೂಟಾಟ ನಿತ್ಯವೂ ನಡೆದಿದ್ದೇ.... ಇದುವರೆಗೂ ಕೃಷ್ಣನಿಗೆ ಸೀರೆ ತಲುಪಿಸಲು ಸಾಧ್ಯವೇ ಆಗಿಲ್ಲ.

ಈ ನಮ್ಮ ಕೃಷ್ಣನಿಗೆ ಗ್ರೀಕರು ಒರೈಯನ್ ಎಂದು ಹೆಸರಿಟ್ಟಿದ್ದಾರೆ. ಆತ ಮಹಾನ್ ಬೇಟೆಗಾರನಂತೆ. ಬಲಶಾಲಿ ಗೂಳಿಯನ್ನು (ವೃಷಭ) ಸೋಲಿಸಿ ''ಎನ್ನ ಸಮಾನರಾರಿಹರು?'' ಎಂದು ಜಂಬ ಕೊಚ್ಚಿಕೊಂಡು ತಿರುಗಾಡುತ್ತಿದ್ದನಂತೆ. ಅದನ್ನು ಕೇಳಿಸಿಕೊಂಡ ದೇವಿಯೊಬ್ಬಳು ''ಮಾಡ್ತೀನಿ ತಾಳು'' ಎಂದು ಚೇಳೊಂದನ್ನು (ವೃಶ್ಚಿಕ) ಬಿಟ್ಟು ಕಚ್ಚಿಸಿ ಬೊಬ್ಬೆ ಹೊಡೆಯುವಂತೆ ಮಾಡಿದಳಂತೆ. ಅದಕ್ಕೇ ನೋಡಿ (ಪೂರ್ವದಲ್ಲಿ) ಚೇಳು ಕಂಡೊಡನೆ (ಪಶ್ಚಿಮದಲ್ಲಿ) ಒರೈಯನ್ ಮಂಗಮಾಯ! ಇನ್ನಾರು ತಿಂಗಳು ಬಿಟ್ಟು ತಲೆ ಎತ್ತಿ ನೋಡಿ - ಅದು ಚೇಳಿನ ರಾಜದರ್ಬಾರು. ಒರೈಯನ್ ನಾಪತ್ತೆ!

ನಮ್ಮಲ್ಲಿ ಕೆಲವರು (ಬಹುಶಃ ಶಿವಾರಾಧಕರು) ಈ ಗೋಪಿಯರ ಗುಂಪನ್ನು ಕೃತ್ತಿಕಾ ಎಂದು ಕರೆದಿದ್ದಾರೆ. ಈ ಆರು ತಾಯಂದಿರು ಸಾಕಿದ ಶಿಶುವೇ ಕಾರ್ತಿಕೇಯನಂತೆ.

ತಲೆ ಎತ್ತಿ ನೋಡಿದ್ದಂತೂ ಆಯಿತು. ಪುನಃ ಬಗ್ಗಿಸುವ ಮೊದಲು ನೆತ್ತಿಯ ಮೇಲೆ ಶನಿಯನ್ನೂ ಪಶ್ಚಿಮದಲ್ಲಿ ಫಳಗುಟ್ಟುವ ಗುರುವನ್ನೂ ನೋಡಿ

ಮ.ಮಾ: ಶನಿಯನ್ನು ನೋಡಿದರೆ ದೋಷವಿಲ್ಲ ವೃಥಾ ಎಳ್ಳೆಣ್ಣೆ ಖರ್ಚುಬೇಡ.

# ಪೋನಿ ಟೈಲ್

– ಎಂ.ಎಸ್. ನರಸಿಂಹಮೂರ್ತಿ

ಮೋಹನನ ಹೆಂಡತಿಗೆ ಗಂಡ ಎಂದರೆ ಅನುಮಾನದ ಮುದ್ದೆ. ಎಲೆಯಾಟ ಮುಗಿಸಿ ಅವನು ಕ್ಲಬ್ಬಿಂದ ತಡವಾಗಿ ಬಂದ ದಿನ ಗಂಡನ ಮೈಮೇಲೆ ಬಿದ್ದು, ಅಪ್ಪಿ, ಆಲಂಗಿಸಿ ಕುಡಿತದ ವಾಸನೆ ಇದೆಯಾ ಎಂಬುದನ್ನು ಕಂಡುಕೊಳ್ಳುವ ಚಟ. ಕುಡಿದಿದ್ದು ರುಜುವಾತಾದರೆ ಅದಕ್ಕೆ ಒಂದಷ್ಟು ಜುಲ್ಮಾನೆ ವಿಧಿಸುತ್ತಾಳೆ. ಆ ಜುಲ್ಮಾನೆ ಕಾಟನ್ ನೈಟಿಯಾಗಬಹುದು ಅಥವಾ ರೇಷ್ಮೆ ಸೀರೆಯೂ ಆಗಬಹುದು.

ವಿಶ್ವ, ಮೋಹನನ ಮನೆಗೆ ಒಮ್ಮೆ ಫೋನು ಮಾಡಿ ಕುದುರೆ ರೇಸಿನ ಬಗ್ಗೆ ಮಾತಾಡುತ್ತಿದ್ದ. ''ರಾಣೀ ಮೇಲೆ ಸಾವಿರ ರೂಪಾಯಿ ಸುರಿ, ನಿನಗೆ ಖುಷಿಯಾಗುತ್ತೆ'' ಎಂದವನು ಮಾತು ಮುಗಿಸಿದ್ದು ಮೋಹನನ ಮಡದಿ ಮೀನಾಗೆ ತಿಳಿದು ಹೋಯಿತು. ಒಂದೇ ಫೋನಿಗೆ ಮತ್ತೊಂದು ಕನೆಕ್ಷನ್ ಇದ್ದರೆ ಇದೇ ಪಜೀತಿ.

''ಯಾರ್ರೀ ರಾಣೀ?'' ಮೀನಾ ಕೇಳಿದಾಗ ಮೋಹನ ತಬ್ಬಿಬ್ಬಾಗಿ, ''ಯಾವ ರಾಣಿ?''

''ಮಹಾರಾಣಿ?''

ಅದು ಕುದುರೆಯ ಹೆಸರು ಎಂದು ಹೇಳುವುದಾದರೂ ಹೇಗೆ? ಮೋಹನ ತೊದಲಿದ.

''ರಾಣಿ ಅಂದ್ರೆ ಸಿನಿಮಾ ಕಣೆ. ರಾಣಿ-ಮಹಾರಾಣಿ! ಮಾರ್ನಿಂಗ್ ಷೋ ನಂತೆ''

''ಮಾರ್ನಿಂಗ್ ಷೋ ಅನ್ನೋ ಅನುಮಾನ ನನಗೂ ಇದೆ. ಆದರೆ ಅವಳ್ಯಾರು?''

ಮಾತು ಬೆಳೆಯುತ್ತಾ ಹೋಯಿತು. ಪರಿಹಾರ ಸಿಗಲಿಲ್ಲ. ಮೀನಾ ವಿಶ್ವನಿಗೇ ಫೋನು ಮಾಡಿದಳು. ಕೂಡಲೇ ಮನೆಗೆ ಬರಲು ತಿಳಿಸಿದಳು.

ವಿಶ್ವ ದಿಢೀರನೆ ಇಳಿದಾಗ ಮೋಹನ್‌ಗೆ ಆಶ್ಚರ್ಯವಾಯಿತು. ಕೇಳಿದ:

''ಏನೋ ಇದು, ಇದ್ದಕ್ಕಿದ್ದ ಹಾಗೆ ಪ್ರತ್ಯಕ್ಷ? ಹಳೆಯ ತಮಿಳು ಸಿನಿಮಾದ ದೇವರ ಹಾಗೆ ಬಂದುಬಿಟ್ಟೆ?''

''ನಾನೇ ನಿಮ್ಮ ಗೆಳೆಯರಿಗೆ ಫೋನ್ ಮಾಡಿ ಕರೆಸಿದ್ದು'' ಮೀನಾ ಚೂಪಾಗಿ ಹೇಳಿದಳು.

''ಯಾಕೆ ಕರೆಸ್ದೆ ಅವನ್ನ?''

''ರಾಣಿ ಯಾರು? ಯಾಕೆ ನೀವು ಒಂದು ಸಾವಿರ ಸುರೀಬೇಕು - ಇವೆಲ್ಲ ಈಗಲೇ ಇತ್ಯರ್ಥ ಆಗಬೇಕು''

ಕುದುರೆ ಜೂಜಿನ ಬಗ್ಗೆ ಹೇಳಿದರೆ ತಲೆಗೆ ಅಪಾಯವಿದೆಯೆಂದು ಗ್ರಹಿಸಿದ ವಿಶ್ವ,

''ರಾಣಿ ಅಂದ್ರೆ ರೇಸ್ ಕುದುರೆ ಅಂತ ಅಂದುಕೊಂಡ್ರಾ ಮೇಡಂ?'' ಎಂದುಬಿಟ್ಟ.

''ಓಹೋ! ರೇಸ್ ಚಟಾನೂ ಶುರುವಾಯ್ತಾ?''

''ಇಲ್ಲ ಮೇಡಂ ರಾಣಿ ಅಂದ್ರೆ ಅದು ಖಂಡಿತ ಕುದುರೆ ಅಲ್ಲ. ನೀವು ಧೈರ್ಯವಾಗಿರಿ''

''ಕುದುರೆ ಧ್ಯಾನ ಇವರು ಆಗಾಗ ಮಾಡ್ತಾ ಇರ್ತಾರೆ. ಅದರ ಬಾಲ ನೋಡು ಎಷ್ಟುದ್ದ ಅಂತ ನಿನ್ನೆ ರಾತ್ರಿ ನಿದ್ದೇಲಿ ಕನವರಿಸಿಕೊಳ್ತ ಇದ್ರು. ನನಗೆ ಆಗಲೇ ಅನುಮಾನ ಬಂದಿತ್ತು.''

''ಬಾಲ ಅಂದ್ರೆ ಅದು ಬಾಲ ಅಲ್ಲ ಮೇಡಂ. ಈಗ ಪೋನಿ ಟೈಲ್ ಅಂತಾರೆ. ಅದು ಕುದುರೇದಾ? ಅಲ್ಲ, ಹುಡುಗೀದು''

''ಏನು ಬಾಲ ಅಂದ್ರೆ ಪೋನಿ ಟೈಲಾ? ಅದಕ್ಕೆ ದುಡ್ಡಾ?'' ಮೀನಾ ರೇಗಿದಾಗ ಮೋಹನ ತಲೆ ತಗ್ಗಿಸಿದ.

''ಬೆಟ್ಟಿಂಗ್ ಮೇಡಂ.'' ವಿಶ್ವ ಉತ್ಸಾಹದಿಂದ ಹೇಳಲು ಶುರುಮಾಡಿದ. ಗೆಳೆಯನನ್ನು ಉಳಿಸಲೇಬೇಕು, ರೇಸ್ ಬಗ್ಗೆ ಮನೇಲಿ ತಿಳಿಯಬಾರದು ಎಂದು ತೀರ್ಮಾನ ಮಾಡಿ,

''ರಾಣಿ ಅಂದ್ರೆ ಡ್ಯಾನ್ಸ್ ಹುಡುಗಿ. ಕ್ಲಬ್ಬಲ್ಲಿ ಕ್ಯಾಬರೇ ಮಾಡ್ತಾಳೆ. ಅವಳು ಯಾವ ಕಲರ್ ಒಳ ಉಡುಪು ತೊಡ್ತಾಳೆ ಅಂತ ಸಾವಿರ ರೂಪಾಯಿ ಬೆಟ್ಟಿಂಗ್ ಮಾಡ್ತೀವಿ. ಡ್ಯಾನ್ಸ್ ಆದಾಗ ಕಲರ್ ತಿಳಿಯುತ್ತೆ. ನಾವು ಗೆದ್ರೆ ಎರಡು ಪಟ್ಟು ಹಣ ವಾಪಸ್ ಬರುತ್ತೆ.''

ಮೀನಾಗೆ ಕೋಪಾ ತಡೆಯದಾಯಿತು. ಮೋಹನ್‌ಗೆ ಏನೂ ತೋಚದೆ ಒದ್ದಾಡಿದ. ಅಷ್ಟರಲ್ಲಿ ಮೀನಾ ''ಕೂಡಿರಿ, ಈಗ ತರ್ತೀನಿ'' ಎಂದು ಧುಸುಧುಮುಗುಡುತ್ತಾ ಅಡಿಗೆ ಮನೆಗೆ ಹೋದಳು. ವಿಶ್ವ ಕುಳಿತೇ ಇದ್ದ.

''ಲೇ ವಿಶ್ವ, ಓಡೋ ಮನೆಗೆ'' ಮೋಹನ ಎಚ್ಚರಿಕೆ ನೀಡಿದ.

''ಏನೋ ತರ್ತೀನಿ ಅಂದ್ರು. ಕಾಫೀನೋ-ಟೀನೋ''

''ಯಾವುದೂ ಅಲ್ಲ, ಲಟ್ಟಣಿಗೆ'' ಎಂದು ಮೋಹನ ಹೇಳಿದಾಗ ವಿಶ್ವ ಜಾಗ ಖಾಲಿ ಮಾಡಿದ.

## ವಿಂಟೇಜ್ ಕೊರವಂಜಿ



ನೀವು ಕಛೇರೀಲಿ ಯಾವಾಗಲೂ ಹೀಗೇ ಕೂತ್ಕೊಳ್ಳೋದು
- ಅದಕ್ಕೇ ಕುರ್ಚೀಗೆ ಎರಡೇ ಕಾಲು ಇಟ್ಟುಬಿಡುತ್ತೇನೆ.

*With Best*

*Compliments From*

# WORLD SPACE ASIA PVT. LTD.

**BANGALORE**




ನಮ್ಮಪ್ಪ ಕೊಂಡುಕೊಂಡದ್ದು ಈ ಕಾರನ್ನ
ನಾನ್ನೂರು ರೂಪಾಯಿಗೆ - ಮಿಲಿಟರಿ ಕಾಂಟ್ರಾಕ್ಟರಿಂದ....
- ನಿಮ್ಮಪ್ಪ ಈಗ ಮಿಲಿಟರಿ ಇಂಜಿನಿಯರಲ್ಲವೇ?
- ಹೌದು, ಮೊನ್ನೆತಾನೆ ಇಲ್ಲಿ ಛಾರ್ಜು ತೆಗೆದುಕೊಂಡರು.

# ಸ್ನೇಹ ವೈಭವ

**– ವಿಮಲಾ ಶೇಷಾದ್ರಿ**

ರಾ.ಶಿ.ಯವರ ಆರಾಧ್ಯ ಕವಿ ವಿ. ಸೀತಾರಾಮಯ್ಯನವರು ತಮ್ಮ ''ಸ್ನೇಹ'' ಎನ್ನುವ ಗೀತೆಯಲ್ಲಿ ''ಸ್ವರ್ಗದೊಳಗೀ ಸ್ನೇಹ ದೊರೆವುದೇನು? ಈ ಪರಿಯ ಸೌಹಾರ್ದ ಕೆಳೆಯ ವೈಭವವು'' ಎಂದು ಸ್ನೇಹ ವೈಭವದ ಬಗ್ಗೆ ನುಡಿದಿದ್ದಾರೆ. ರಾಶಿ ರತ್ನರ ಸ್ನೇಹ ಸೌಭಾಗ್ಯ ಅದೇ ರೀತಿ ತುಂಬಾ ಅತಿಶಯವಾದದ್ದು. ವಿದ್ಯಾರ್ಥಿಯಾಗಿರುವಾಗಲೇ ರಾ.ಶಿ.ಯವರು ರಾಜರತ್ನಂ ಅವರನ್ನು ಕೆ.ವಿ. ಅಯ್ಯರ್ ಅವರ ವ್ಯಾಯಾಮ ಶಾಲೆಯಲ್ಲಿ ಭೇಟಿಯಾಗುತ್ತಿದ್ದರು. ಕೈಲಾಸಂ ಗರಡಿಯಲ್ಲೇ ಇಬ್ಬರೂ ಮಾತು, ಯೋಚನೆಗಳ ಸಾಮುಗಳನ್ನು ರೂಢಿಸಿಕೊಂಡಿದ್ದು. ಅಂದು ಆರಂಭವಾದ ಸ್ನೇಹ ಕಡೆಯವರೆವಿಗೂ ಬೆಳೆಯುತ್ತಲೇ ಬಂತು.

ಇಬ್ಬರೂ ಮಲ್ಲೇಶ್ವರದಲ್ಲೇ ಇದ್ದುದರಿಂದ ರಾಜರತ್ನಂ ಅವರು ಆಗಾಗ ಬೆಳಗಿನ ಹೊತ್ತು ಬರುತ್ತಿದ್ದುದು ರೂಢಿ. ರಾ.ಶಿ. ಯವರು ರಾಜರತ್ನಂ ಅವರ ಮನೆ ವೈದ್ಯರು ಕೂಡ ಆಗಿದ್ದರು. ಶ್ರೀಲತಾ ಪುಟ್ಟ ಹುಡುಗಿಯಾಗಿದ್ದಾಗ ಅವಳನ್ನು ರಾಜರತ್ನಂ ಅವರು ಮನೆಗೆ ಕರೆತಂದರಂತೂ ನಮಗೆಲ್ಲಾ ಖುಷಿಯೋ ಖುಷಿ. ಆ ಮಗುವನ್ನು ನಾ ಮುಂದು ತಾ ಮುಂದು ಎಂದು ಮುದ್ದಿಸುತ್ತಿದ್ದೆವು. ಇಬ್ಬರೂ ಮೂಲಭೂತವಾಗಿ ಸಮಾನಧರ್ಮ ಹೊಂದ್ದಿರೂ, ವ್ಯಕ್ತಿತ್ವದಲ್ಲಿ ವಿಭಿನ್ನತೆ ಇತ್ತು. ಆದರೂ ಒಬ್ಬರನ್ನು ಕಂಡರೆ ಇನ್ನೊಬ್ಬರಿಗೆ ಗೌರವ, ಆದರ. ಅವರಿಬ್ಬರನ್ನೂ ಬೆಸೆಗಿದ್ದು ಅವರಲ್ಲಿದ್ದ ಕನ್ನಡ ಸಾಹಿತ್ಯ ಪ್ರೇಮ. ಒಮ್ಮೆ ಮಟ ಮಟ ಮಧ್ಯಾಹ್ನ ಬಿಸಿಲಿನಲ್ಲಿ ಸೆಂಟ್ರಲ್ ಕಾಲೇಜಿನಿಂದ ನಡೆದೇ ಬಂದಿದ್ದರು. ರಾಜರತ್ನಂ ರಾ.ಶಿ.ಯವರನ್ನು ಕೈಲಾಸಂರವರ ಹಾಸ್ಯದ ಬಗ್ಗೆ ಪರಿಷತ್ತಿನಲ್ಲಿ ಭಾಷಣ ಮಾಡಲು ಒಪ್ಪಿಸುವುದಕ್ಕೆ ಎರಡು ಗಂಟೆಗಳ ಕಾಲದ ವಿರಾಮದಲ್ಲಿ ಬಂದಿದ್ದರು. ಕನ್ನಡಕ್ಕೋಸ್ಕರ ಏನು ಬೇಕಾದರೂ ಮಾಡಲು ಸಿದ್ಧರಾಗಿದ್ದ ರಾಜರತ್ನಂ ಅವರನ್ನು ಕಂಡರೆ ರಾ.ಶಿ.ಯವರಿಗೆ ಅಸಾಧಾರಣ ಮೆಚ್ಚುಗೆ. ಹಾಗೇ ಆಶ್ಚರ್ಯಕೂಡ, ಬುದ್ಧನನ್ನು ಕುರಿತು ರಾಜರತ್ನಂ ಅಘರು ಬರೆದ ಪುಸ್ತಕಗಳನ್ನು ಓದಿದ ರಾ.ಶಿ.ಯವರಿಗೆ ಅದರಲ್ಲಿದ್ದ ''ಭಂತೇ'' ಎನ್ನುವ ಸಂಬೋಧನಾ ಪದ ತುಂಬಾ ಹಿಡಿಸಿ, ರಾಜರತ್ನಂ ಅವರನ್ನು ''ಭಂತೇ'' ಎಂದೇ ಕರೆಯುತ್ತಿದ್ದರು! ''ಹೆಂಡ ಕುಡಿಯದೇ ಇದ್ದ ಯಂಡ್ಕುಡ್ಕ ರತ್ನನಿಗೆ ಪುಸ್ತಕದ ಅಮಲೇ ತೀವ್ರತಮ, Books and Shelves of books ಇದೇ ನನ್ನ ಪರ್ಪಂಚ ಎನ್ನಬಹುದಿತ್ತು ರಾಜರತ್ನಂ''

ಎನ್ನುತ್ತಿದ್ದರು ರಾ.ಶಿ. ಮನೋ ದೈಹಿಕ ಬೇನೆಗಳ ಬಗ್ಗೆ ರಾ.ಶಿ.ಯವರು ಬರೆದ ''ಮನೋನಂದನ''ವನ್ನು ಬೆಳಕಿಗೆ ತಂದ ಖ್ಯಾತಿ ಖಂಡಿತಾ ರಾಜರತ್ನಂ ಅವರಿಗೆ ಸಲ್ಲಬೇಕು. ಎರಡು ಮೂರು ವರ್ಷಗಳ ಕಾಲ ರಾ.ಶಿ.ಯವರನ್ನು ಒತ್ತಾಯಿಸಿ, ತಾವೇ ಅದನ್ನು ಪ್ರಕಟಿಸಿ, ಮನೆ ಮನೆಯ ಹೊಸಿಲ ದಾಟಿ, ಕೆಲವಾರು ಪುಸ್ತಕ ವ್ಯಾಪಾರಿ ಅಂಗಡಿಗಳಿಗೆ ನಿತ್ಯಯಾತ್ರೆ ಮಾಡಿ ಎರಡು ವರ್ಷಗಳಲ್ಲಿ ಎಲ್ಲಾ ಕೃತಿಗಳನ್ನು ಮಾರಿದರು. ಅವರು ಸಾಹಿತ್ಯ ಪರಿಚಾರಿಕೆಗೆ ಪಡುತ್ತಿದ್ದ ಕಷ್ಟ ಅಷ್ಟಿಷ್ಟಲ್ಲ. ರಾ.ಶಿ.ಯವರು ಇದೆಂತಹ ಪರಿಚಾರಿಗೆ ಎಂದರೆ ರಾಜರತ್ನಂ ನಗುತ್ತಿದ್ದರು. ಮುಗ್ಧಮಗುವಿನ ನಗೆ. ರಾ.ಶಿ.ಯವರು ಅವರನ್ನು ಮುಗ್ಧಮಗು ಎಂದು ಹೇಳುತ್ತಿದ್ದರು. ''ಸಾಕಷ್ಟು ಪಾಂಡಿತ್ಯ ಪಡೆದವರೇ ಉತ್ತಮ ಸಾಹಿತ್ಯ ಪರಿಚಾರಕರಾಗಲು ಸಾಧ್ಯ. ಎಷ್ಟು ಜನ ಪಂಡಿತರು ಇಂತಹ ಪರಿಚಾರಿಕೆಗೆ ಸಿದ್ಧ'' ಎಂದು ಮನಸಾರೆ ಪ್ರಶಂಸಿದ್ದಿರೆ ರಾ.ಶಿ. ಮುಂದೆ ''ಕೆಣಕೋಣ ಬಾರ'' ಹೊರ ಬರುವುದಕ್ಕೂ ರಾಜರತ್ನಂ ಸಾಕಷ್ಟು ಶ್ರಮಪಟ್ಟರು.

ಗಾಂಧೀಜಿಯವರು ಗುಂಡಿನೇಟಿನಿಂದ ಅಸು ನೀಗಿದ ಸಂಜೆ ರಾಜರತ್ನಂ, ನಮ್ಮ ಮನೆಯಲ್ಲಿದ್ದರು. ರಾ.ಶಿ.ಯವರೂ ಅವರೂ ರೇಡಿಯೋದಲ್ಲಿ ಆ ದುಃಖ ಸಮಾಚಾರ ಕೇಳಿ ಮೌನವಾಗಿ ಕುಳಿತಿದ್ದು, ರಾಜರತ್ನಂ ಸ್ನಾನಮಾಡಿ ಬಂದ ಮೇಲೆ ರಾ.ಶಿ.ಯವರ ಸ್ನಾನ. ಗಾಂಧೀಜಿಯವರ ಪ್ರಭಾವ ಅವರಿಬ್ಬರ ಮೇಲೆ ಗಾಢವಾಗಿತ್ತು. ತಮ್ಮ ಹಿರಿಯರನ್ನು ಕಳೆದುಕೊಂಡಷ್ಟೇ ಶೋಕ ಅವರಿಬ್ಬರಿಗೂ ಆಗ.

ಒಮ್ಮೆ ನಾನು ಷಡಕ್ಷರಿಯ ಬಗ್ಗೆ ಲೇಖನ ಒಂದನ್ನು ಬರೆಯಬೇಕಾಗಿತ್ತು. ಅದಕ್ಕೆ ಬೇಕಾದ reference books ಬಗ್ಗೆ ಅವರ ಹತ್ತಿರ ಪ್ರಸ್ತಾಪ ಮಾಡಿದಾಗ, ಮರುದಿನವೇ ಆ ಮಹರಾಯ ತಾವೇ ಕನ್ನಡ ಸಾಹಿತ್ಯ ಪರಿಷತ್ತಿನಿಂದ, ಮತ್ತು ಇನ್ನೂ ಕೆಲವು ಗ್ರಂಥಾಲಯಗಳಿಂದ ಪುಸ್ತಕಗಳನ್ನು ತಂದುಕೊಟ್ಟೇಬಿಟ್ಟರು. ಕಿರಿಯರನ್ನು ಪ್ರೋತ್ಸಾಹಿಸುವ ರೀತಿ ನೋಡಿ ನನಗೆ ಏನು ಮಾಡಬೇಕೆಂದೇ ತೋರಲಿಲ್ಲ. ಹೃದಯಪೂರ್ವಕವಾಗಿ ವಂದಿಸಿದೆ ಅವರನ್ನು. ಅಂತಹ ಘಟನೆಗಳನ್ನು ಮರೆಯಲು ಸಾಧ್ಯವೇ?

ಅವರು ಸಾಧಾರಣವಾಗಿ ಪುಸ್ತಕಗಳನ್ನೇ ಉಡುಗೊರೆಯಾಗಿ ಕೊಡುತ್ತಿದ್ದರು. ನನ್ನ ಮದುವೆಯಲ್ಲೂ ಪುಸ್ತಕಗಳನ್ನೇ ಕೊಟ್ಟಿದ್ದರು. ನನ್ನ ತಂಗಿ ಕಮಲಳ ಮದುವೆಯಲ್ಲಿ ''ಕಸ್ತೂರಿ ತಿಲಕಂ'' ಮತ್ತು ಕಿರಿಯ ತಂಗಿ ಲೀಲಳ ಮದುವೆಯಲ್ಲಿ ''ಜಯಮಂಗಳಂ'' ಕೃತಿಗಳನ್ನು ಮದುವೆಯ ಪ್ರಯುಕ್ತ ಪ್ರಕಟಿಸಿ ವಧೂವರರಿಗೆ ಆಶೀರ್ವಾದ ಪೂರ್ವಕವಾಗಿ ಕೊಟ್ಟರು, ದಂಪತಿಗಳು ಬಂದು.

ನಾವು ಮೂವರು ಅಕ್ಕತಂಗಿಯರಿಗೂ ಚೊಚ್ಚಲು ಸಂಭ್ರಮ ಒಟ್ಟಿಗೇ ಆಗಬೇಕೇ? ಮೊದಲು ಕಿರಿಯ ತಂಗಿಯ ಮಗ ಹುಟ್ಟಿದ, ಅದಾದ ಮೂರು ತಿಂಗಳಿಗೆ ನನ್ನ ಮೊದಲ ತಂಗಿಯ ಮಗಳು ಹುಟ್ಟಿದಳು. ಅದಾದ ೨೪ನೇ ದಿನಕ್ಕೆ ನನ್ನ ಮಗ ಭುವಿಗೆ ಬಂದ. ಸಾಧಾರಣವಾಗಿ ಬಸುರಿಯರು ತಿಂಡಿ, ತೀರ್ಥ, ಒಡವೆ, ವಸ್ತು, ಸೀರೆ ಬಟ್ಟೆ ಬಯಸಿದ್ದರೆ ನಮ್ಮ ಮೂರು ಜನರಿಗೂ ಡಿ.ವಿ.ಜಿ. ಯವರ ಹಸ್ತಾಕ್ಷರವಿರುವ ''ಮಂಕುತಿಮ್ಮನ ಕಗ್ಗ''ದ ಪ್ರತಿಗಳು ಬೇಕೆಂಬ ಬಯಕೆ. ರಾಜರತ್ನಂ ಅವರಿಗೆ ಇದು ಹೇಗೆ ಗೊತ್ತಾಯಿತೋ ಕಾಣೆ, ಡಿ.ವಿ.ಜಿ. ಅವರಿಗೆ ಹೇಳಿ ಹಸ್ತಾಕ್ಷರವಿರುವ ''ಮಂಕುತಿಮ್ಮನ ಕಗ್ಗ''ದ ಪ್ರತಿಗಳನ್ನು ನಮಗೆ ಪ್ರೀತಿಯಿಂದ ತಂದುಕೊಟ್ಟರು. ಇಂದಿಗೂ ಆ ಮಂಕುತಿಮ್ಮನ ಕಗ್ಗದ ಮೊದಲ ಪುಟದಲ್ಲಿ ಚಿ||ಸೌ|| ಶ್ರೀಮತಿ ವಿಮಲಾ ಅವರಿಗೆ ಪ್ರೀತಿಯ ಆಶೀರ್ವಾದಗಳೊಡನೆ ಡಿ.ವಿ.ಜಿ. ಎನ್ನುವುದನ್ನು ನೋಡಿದಾಗಲೆಲ್ಲಾ ರಾಜರತ್ನಂ ಅವರ ನೆನಪು ಬರುತ್ತದೆ.

ರಾಜರತ್ನಂ ಅವರ ೬೦ನೆಯ ಹುಟ್ಟು ಹಬ್ಬದ ಸಮಾರಂಭ ತುಂಬಾ ಚೆನ್ನಾಗಿ ಜರುಗಿತು. ಆ ಸಂದರ್ಭದಲ್ಲಿ ರಾ.ಶಿ.ಯವರು ''ಇಂದಾನೊಂದು ಕಾಲದಲ್ಲಿ'' ಎನ್ನುವ ಕೃತಿಯನ್ನು ರಚಿಸಿ ಅದನ್ನು ತಮ್ಮ ಪ್ರೀತಿಯ ಗೆಳೆಯ ರಾಜತ್ನಂ ಅವರಿಗೆ ಅರ್ಪಿಸಿದರು.

ನಾಲ್ಕು ಜನರಿಗೆ ಒಳ್ಳೆಯದಾಗುವ ಕೆಲಸಕ್ಕೆ ಇಬ್ಬರೂ ಮುನ್ನುಗ್ಗುತ್ತಿದ್ದರು. ರಾಜರತ್ನಂ ಅವರ ಪತ್ನಿ ಸೀತಮ್ಮನವರು ತೀರಿಕೊಂಡಾಗ ರಾ.ಶಿ.ಯವರು ರಾಜರತ್ನಂ ಅವರ ಕಷ್ಟಭಾಗಿಗಳಾಗಿ, ಅವರಿಗೆ ಸಮಾಧಾನ, ಸಾಂತ್ವನ ನೀಡಿದರು. ಇಬ್ಬರೂ ಮನ ಬಿಚ್ಚಿ ಮಾತನಾಡಿ ತಮ್ಮ ಚಿಂತೆಯನ್ನು ದೂರಮಾಡಿಕೊಳ್ಳುತ್ತಿದ್ದರು. ಒಮ್ಮೆ ಮಲ್ಲೇಶ್ವರದ ಒಂದು ಬಾಲ ವಿಕಾಸದಲ್ಲಿ ಕಥೆ ಹೇಳಲು ಹೋದಾಗ ಮನೆಯಾಕೆ ಇರಲಿಲ್ಲ ಅಂತ ಮನೆಯಾತ ಬಂದ ಮಕ್ಕಳನ್ನು ಹಿಂತಿರುಗಿಸಿ ಕಳುಹಿಸಿಬಿಟ್ಟಿದ್ದರಂತೆ. ರಾಜರತ್ನಂ ಹೋಗಿ ಅಲ್ಲಿ ಮಕ್ಕಳಿಲ್ಲದೆ ತುಂಬಾ ಬೇಸರಪಟ್ಟುಕೊಂಡು ರಾ.ಶಿ.ಯವರ ಹತ್ತಿರ ಬಂದು ಉತ್ಸಾಹದಿಂದ ಕತೆ ಕೇಳಲು ಬರುವ ಮಕ್ಕಳಿಗೆ ಉತ್ಸಾಹದಿಂದ ಸಾಯಿಚಿಂತನ ಮಾಡಲಾಗಲಿಲ್ಲವೆಂಬ ಅಳಲನ್ನು ತೋಡಿಕೊಂಡರಂತೆ. ರಾ.ಶಿ.ಯವರು ''ಮಕ್ಕಳಿಗೆ ಏನು ಹೇಳುತ್ತಿದ್ದಿರೋ ಅದನ್ನು ನನಗೇ ಹೇಳಿ,'' ಎಂದು ಹೇಳಿ ಅವರು ಹೇಳಿದ ಮೂರು ಸ್ವಾರಸ್ಯವಾದ ಸಾಯಿಬಾಬಾ ರವರ ಕಥೆಗಳನ್ನು ಆಸ್ಥೆಯಿಂದ ಕೇಳಿದರಂತೆ.

ರಾಜರತ್ನಂ ಅವರಿಗೆ ಕಾಲು ಪೆಟ್ಟಾಗಿ ಆಸ್ಪತ್ರೆಗೆ ಸೇರಬೇಕಾಗಿ ಬಂದಾಗ ಎಲ್ಲರಿಗೂ ಆತಂಕ ಡಯಾಬಿಟಿಸ್ ಇದ್ದದ್ದರಿಂದ ಶಸ್ತ್ರ ಚಿಕಿತ್ಸೆ ಮಾಡಬೇಕಾಗಿ

ಬಂದು ಸುಮಾರು ೨-೩ ವಾರಗಳ ಕಾಲ ಆಸ್ಪತ್ರೆಯಲ್ಲಿ ಇರಬೇಕಾಯಿತು. ಗಾಂಧಿ ಸಾಹಿತ್ಯ ಸಂಘದ ಯುವಕರು, ಇತರ ಸ್ನೇಹಿತರು ಮತ್ತು ಮನೆಯವರು ಅವರ ನೆರವಿಗೆ ನಿಂತರು. ಸಂಜೆ ಹೊತ್ತು ರಾ.ಶಿ.ಯವರು ಹೋಗಿ ಅಪ್ಸರೆಯರ ಕಥೆಗಳನ್ನು ಹೇಳಿ ಅವರನ್ನು ನಗಿಸಿ ಬರುತ್ತಿದ್ದರು. ಮುಂದೆ ಕೃತಿರೂಪದಲ್ಲಿ ಬಂದ ಅಪ್ಸರೆಯರ ಕಥೆಗಳ ಜನನ ಆಸ್ಪತ್ರೆಯಲ್ಲೇ. ಸ್ವಾಮಿಯವರು ಕಳುಹಿಸಿಕೊಟ್ಟಿದ್ದ ವಿಭೂತಿ ಪ್ರಸಾದದಿಂದ ತಮ್ಮ ಕಾಲು ಉಳಿದದ್ದು ಎಂದು ದೃಢವಾಗಿ ನಂಬಿದ್ದರು ರಾಜರತ್ನಂ. ಅವರು ಕೊಟ್ಟ ಕಾಲು ಅವರ ಸೇವೆಗೇ ಮೀಸಲು ಎಂದು ವಿಪುಲವಾದ ಸಾಯಿ ವಾಙ್ಮಯವನ್ನು ಬರೆದು ಮುದ್ರಿಸಿ ಮನೆ ಮನೆಗೂ ಹೋಗಿ ಹಂಚುತ್ತಿದ್ದರು.

ಒಮ್ಮೆ ರಾ.ಶಿ.ಯವರು ಹಜರತ್ ಪೈಗಂಬರರನ್ನು ಕುರಿತು ರ್‍ಯಾಡಿನ್ಸನ್ ಎಂಬ ಸಂಶೋಧನಕಾರ ಬರೆದಿದ್ದ ಪುಸ್ತಕವನ್ನು ಓದುತ್ತಿದ್ದರು. ಅದರಲ್ಲಿ ಸಂತಳಾದ ರಾಬಿಯಾಳ ವಿಚಾರ ತುಂಬಾ ಸ್ವಾರಸ್ಯಕರವಾಗಿ ಇತ್ತಂತೆ. ಅಷ್ಟುಹೊತ್ತಿಗೆ ಸರಿಯಾಗಿ ರಾಜರತ್ನಂ ಬಂದದ್ದರಿಂದ ಅವರಿಗೆ ಅವಳ ವಿಷಯ ತಿಳಿಸಿ ಭಕ್ತಿ ಪ್ರಪತ್ತಿಗಳ ವಿಚಾರ ವಿಶ್ಲೇಷಣೆಯನ್ನು ಮಾಡಿದಂತೆ. ''ನಾನೂ ಅನೇಕ ಇಸ್ಲಾಂ ಧರ್ಮವನ್ನು ಕುರಿತ ಪುಸ್ತಕಗಳನ್ನು ಓದಿದ್ದೇನೆ, ಎಲ್ಲೂ ರಾಬಿಯಾಳ ವಿಚಾರ ಇರಲಿಲ್ಲ ನೀವು ಮುಗಿಸಿದ ಮೇಲೆ ಒಂದೆರಡು ದಿನ ಆ ಪುಸ್ತಕ ನನಗೆ ಕೊಡಿ'' ಎಂದು ಕೇಳಿ, ಅದನ್ನು ಓದಿ ''ಇಸ್ಲಾಂ ಧರ್ಮದ ಪರಿಮಳ ಎಂಬ ಪುಸ್ತಕದಲ್ಲಿ ವಿರಾಗಿಣಿ ರಬಿಯಾ ವಿಚಾರ ಬರೆದರು. ತಾವು ಮೆಚ್ಚಿದ್ದನ್ನು ಎಲ್ಲರಿಗೂ ಹಂಚಬೇಕು ಎಂಬ ಮಹದಾಸೆ ಅವರಿಗೆ. ರಾ.ಶಿ. ಮತ್ತು ರತ್ನರ ಮಾತುಕತೆಗಳೆಲ್ಲಾ ಗಹನವಾದ ವಿಚಾರಗಳದ್ದೇ ಆಗಿರುತ್ತಿದ್ದವು. ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳ ಬಗ್ಗೆಯೂ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು. ''ಬಾಳನ್ನು ವಿಹಂಗಮ ದೃಷ್ಟಿಯಿಂದ ನೋಡಿದರೆ, ಅದ್ಭುತ ಎನಿಸಿ ''ನಮ್ಮ'' ಎಂಬ ಹುಂಬತನ ಅರಿವಾಗುತ್ತದೆ. ಈ ಪಾಠವನ್ನು ರಾಜರತ್ನಂ ಅವರ ಬಾಳಿನಿಂದ ಕಲಿತೆ'' ಎಂದಿದ್ದಾರೆ ರಾಶಿ.

ಒಮ್ಮೆ ರಾಜರತ್ನಂ ಅವರು ನನ್ನೊಡನೆ ಮಾತನಾಡುತ್ತ ''ಡಾಕ್ಟ್ರು, ದೇವರ ಬಗ್ಗೆ ಏನೇನೋ ಮೇಲೆ ಮೇಲೆ ಒರಟಾಗಿ ಹೇಳಿದರೂ ಅವರಿಗೆ ದೇವರಲ್ಲಿ ನಂಬಿಕೆ ಇದೆಮ್ಮಾ'' ಎಂಬ ಅರ್ಥ ಬರುವ ಮಾತನಾಡಿದ್ದರು. ಮುಗ್ಧ ನಗೆಯ ರಾಜರತ್ನಂ ಅವರನ್ನು ರಾ.ಶಿ.ಯವರು ''ಪರಿಶುದ್ಧಮಗು'' ಎನ್ನುತ್ತಿದ್ದರು.

ನಾನು ಅವರನ್ನು ಯಾವ ಸಭೆಗೆ ಕರೆಯಲು ಹೋದರೂ, ಆದರದ ಆತಿಥ್ಯ ನೀಡಿ, ತುಂಬಾ ಆಸಕ್ತಿಯಿಂದ ಬಂದು ಆ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದರು. ಒಮ್ಮೆ ಮೈಸೂರಿನಲ್ಲಿ ಶ್ರೀ ಸತ್ಯಸಾಯಿ ಬಾಲವಿಕಾಸದ

ಶಿಕ್ಷಕಿಯರ ತರಬೇತಿ ಶಿಬಿರ ಏರ್ಪಾಡಾಗಿತ್ತು. ನಾನು ರಾಜ್ಯ ಮಟ್ಟದ ಬಾಲವಿಕಾಸದ ಸಂಚಾಲಕಿಯಾದ್ದರಿಂದ ತರಬೇತಿ ಶಿಬಿರಕ್ಕೆ ಬೇಕಾದ ಪುಸ್ತಕಗಳನ್ನು ಅಚ್ಚಿಗೆ ಕೊಟ್ಟಿದ್ದೆ. ಆ ಶಿಬಿರಕ್ಕೆ ಶ್ರೀ ರಾಜರತ್ನಂ ಮತ್ತು ಡಾ।। ವಿ.ಕೃ. ಗೋಕಾಕರು ಮಾನ್ಯ ಭಾಷಣಕಾರರಾಗಿ ಬರುವವರಿದ್ದರು. ನಾನು ಶಿಬಿರದ ಮುನ್ನಾ ದಿನವೇ ಮೈಸೂರಿಗೆ ಹೋಗಿ ಎಲ್ಲಾ ಏರ್ಪಾಡುಗಳನ್ನು ಮಾಡಬೇಕಾಗಿತ್ತು. ಪ್ರೆಸ್‌ನವರು ನಾನು ಅಚ್ಚಿಗೆ ಕೊಟ್ಟಿದ್ದ ಪುಸ್ತಕಗಳನ್ನು ಇನ್ನೂ ಕೊಟ್ಟಿರಲಿಲ್ಲ. ನನ್ನ ಮಗ ಶ್ರೀಧರ ಅದನ್ನು ತೆಗೆದುಕೊಂಡು ಬರಲು ಹೋಗಿದ್ದ. ನಾನು ಹೊರಡುವ ವೇಳೆ ಹತ್ತಿರವಾಗುತ್ತಿತ್ತು. ಶ್ರೀಧರ ಇನ್ನೂ ಪ್ರೆಸ್‌ನಲ್ಲೇ ಕಾಯುತ್ತಿದ್ದ. ಆಗ ಯಾವುದೋ ಕೆಲಸಕ್ಕೆ ಅದೇ ಪ್ರೆಸ್‌ಗೆ ರಾಜರತ್ನಂ ಅವರು ಹೋಗಿ ಶ್ರೀಧರನಿಂದ ವಿಚಾರ ತಿಳಿದು ''ಮಗೂ, ನೀನು ಮನೆಗೆ ಹೋಗು ಆ ಪುಸ್ತಕಗಳನ್ನು ನಾನು ತೆಗೆದುಕೊಂಡು ಹೋಗಿ ಮೈಸೂರಿನಲ್ಲಿ ತಲಪಿಸುತ್ತೇನೆ'' ಎಂದು ಹೇಳಿ ಅವನನ್ನು ಮನೆಗೆ ಕಳುಹಿಸಿದರು. ಯಾವ ಮುಖ್ಯ ಅತಿಥಿ ಈ ರೀತಿ ಸಹಾಯ ಮಾಡಬಲ್ಲರು, ರಾಜರತ್ನಂ ಒಬ್ಬರನ್ನು ಬಿಟ್ಟು. ಹೀಗೆ ಹಲವಾರು ಸಂದರ್ಭಗಳಲ್ಲಿ ನನ್ನ ನೆರವಿಗೆ ಬಂದಿದ್ದಾರೆ. ನನ್ನ ಅನೇಕ ಕೆಲಸಗಳಿಗೆ ಪ್ರೋತ್ಸಾಹ ನೀಡಿದ್ದಾರೆ.

ಶ್ರೇಷ್ಠವಾದ ಶಿಶು ಸಾಹಿತ್ಯವನ್ನು ರಚಿಸಿದ ರಾಜರತ್ನಂ ಅವರಿಗೆ ಮಕ್ಕಳನ್ನು ಕಂಡರೆ ಅಪಾರ ಪ್ರೀತಿ. ಅವರ ಕಂಠಶ್ರೀ, ವಾಕ್ಚತುರತೆ, ಹೃದಯದಿಂದ ಉಕ್ಕಿ ಬರುವ ಮಾತುಗಳಿಗೆ ಮಾರು ಹೋಗದವರಾರು? ಚಿಕ್ಕಂದಿನಿಂದ ನನಗೆ ರಾಜರತ್ನಂ ಅವರನ್ನು ಕಾಣುವ, ಕೇಳುವ ಭಾಗ್ಯ ಒದಗಿದಂತೆಯೇ ನನ್ನ ಮಗ ಶ್ರೀಧರ ಮತ್ತು ಮಗಳು ಪದ್ಮಜಾ ಅವರುಗಳಿಗೆ ಆ ಸುಯೋಗ ದೊರಕಿತ್ತು. ಶ್ರೀಧರ ಹುಟ್ಟಿದಾಗ ಆಸ್ಪತ್ರೆಗೇ ಬಂದು ಅವನನ್ನು ನೋಡಿ ಸಂತಸಪಟ್ಟಿದ್ದರು. ಮುಂದೆ ಸ್ವಾಮಿಯವರ ಸನ್ನಿಧಿಯಲ್ಲಿ ಅವನ ಉಪನಯನ ಮತ್ತು ಪದ್ಮಜಾಳ ಅಕ್ಷರಾಭ್ಯಾಸ ಒಟ್ಟಿಗೆ ನಡೆದಾಗಲೂ ಬಂದು ಮಕ್ಕಳನ್ನು ಆಶೀರ್ವದಿಸಿ ತಮ್ಮ ಹಸ್ತಾಕ್ಷರವುಳ್ಳ ಪುಸ್ತಕಗಳನ್ನು ಉಡುಗೊರೆಯಾಗಿ ಕೊಟ್ಟರು. ನಾವು ಸದಾಶಿವನಗರದ ಮನೆಗೆ ಬಂದಾಗಲೂ ಹೊಸ ಮನೆ ನೋಡಲು ಬಂದಿದರು. ಮಕ್ಕಳಿಗಂತೂ ಅವರು ಬಂದರೆ ಸಂಭ್ರಮ. ಶ್ರೀಧರ ಮಗುವಾಗಿದ್ದಾಗ ಅವರ ಎದುರಿಗೆ ಬಣ್ಣದ ತಗಡಿನ ತುತ್ತೂರಿ ಪದ್ಯ ಹೇಳಿದ್ದೇ ಹೇಳಿದ್ದು. ಮನೆಗೆ ಬಂದಾಗಲೆಲ್ಲಾ ಏನಾದರು ಹೊಸ ವಿಷಯ ಹೇಳುತ್ತಿದ್ದರು. ಒಮ್ಮೆ ''ಇಂತಹವೆಷ್ಟೋ ಆಗಲೇ ಬೇಕಲ್ಲಾ ಲೋಕ ಪ್ರಸಿದ್ಧಿಯ ಜಯದಲಿ'' ಅನ್ನುವ ಸಾಲುಗಳನ್ನು ಹೇಳಿದಾಗ ತುಂಬಾ ಸಂತೋಷಪಟ್ಟುಕೊಂಡು ಪರವಾಗಿಲ್ಲ ಕನ್ನಡ ಕವನಗಳನ್ನು ಮರೆತಿಲ್ಲವಲ್ಲಾ ಎಂದಿದ್ದರು. ಹೊಸ ಪುಸ್ತಕಗಳು ಪ್ರಕಟವಾದ

ತಕ್ಷಣ ಅವುಗಳನ್ನು ತಂದು ನಮಗೆ ತಲುಪಿಸುತ್ತಿದ್ದರು. ಅವರ ಸಾಯಿಪರ್ವ ಆರಂಭವಾದ ಮೇಲೆ ನಾವು ಅವರಲ್ಲಿಗೆ ಹೋಗುವುದು, ಅವರು ನಮ್ಮಲ್ಲಿಗೆ ಬರುವುದು ಹೆಚ್ಚಾಯಿತು, ಹಿರಿಯರಾದ ಅವರು ಬಂದರೆ ನಮಗೆಲ್ಲಾ ಏನೋ ಸಂತೋಷ, ಶೇಷಾದ್ರಿಯವರಿಗಂತೂ ಅವರನ್ನು ಕಂಡರೆ ತುಂಬಾ ಆದರ.

ಅವರ ಪತ್ನಿ ಸೀತಮ್ಮನವರೂ ತುಂಬಾ ಸರಳ ಸ್ವಭಾವದವರು. ಹಬ್ಬ ಹರಿದಿನಗಳಲ್ಲಿ ನಮ್ಮನ್ನು ಅವರ ಮನೆಗೆ ಕರೆಯುತ್ತಿದ್ದರು. ನನ್ನ ಮಗಳು ಪದ್ಮಜಾ ಕೆಲವು ದಿನಗಳ ಸಣ್ಣ ಮಗುವಾಗಿದ್ದಾಗ ನನ್ನನ್ನೂ ಮಗುವನ್ನೂ ನೋಡಲು ಬಂದಿದ್ದರು'' ಆರೋಗ್ಯ ಚೆನ್ನಾಗಿ ನೋಡಿಕೊಮ್ಮಾ, ಹೆಚ್ಚು ಮೆಟ್ಟಲು ಹತ್ತಿ ಇಳಿದು ಮಾಡಬೇಡ'' ಅಂತ ತುಂಬಾ ಕಳಕಳಿಯಿಂದ ನುಡಿದಿದ್ದರು. ಅವರ ಮಕ್ಕಳಾದ ಶ್ರೀಮತಿ ಶ್ರೀಲತಾ ಕೂಡ ತುಂಬಾ ಸ್ನೇಹಪರರು.

ಶ್ರೀ ವೈಷ್ಣವ ಸಂಪ್ರದಾಯದಲ್ಲಿ ರಾಜರತ್ನಂ ಅವರಿಗೆ ಪೂರ್ಣ ನಂಬಿಕೆ, ಮಿಕ್ಕ ಧರ್ಮಗಳ ಬಗ್ಗೆ ಪೂರ್ಣ ಸಹಿಷ್ಣುತೆ. ಎಲ್ಲಾ ಧರ್ಮಗಳ ಸಾರ ಸಂಗ್ರಹವನ್ನು ಕನ್ನಡಿಗರಿಗೆ ಹಂಚಿದರು. ಅದಕ್ಕಾಗಿ ಅವರು ಪ್ರಾಕೃತ, ಪಾಲಿ, ಅಧಮಾಗಧಿ ಭಾಷೆಗಳನ್ನೂ ಕಲಿತರು - ವಿಶ್ವಧರ್ಮಿಗಳಾದರು.

ರಾ.ಶಿ. ಮತ್ತು ರಾಜರತ್ನಂ ಅವರ ಸ್ನೇಹ ಅಪೂರ್ವವಾದುದು. ಅವರಿಬ್ಬರ ಸಾಹಿತ್ಯ ಸೇವೆ ಚಿಂತನೆಗಳು ಕನ್ನಡಿಗರ ಮನಸ್ಸಿನಲ್ಲಿ ಸದಾ ಹಸಿರು. ಅವರಿಬ್ಬರ ನೆನಪಿನ ನಂದಾದೀಪ ಸದಾ ಉಜ್ವಲವಾಗಿ ಪ್ರಕಾಶಿಸಲಿ.

**ಈ ಸಲ**
**ಲೋಕ ಸಭೆಯಲ್ಲಿ**
**ಈ ಸಲ**
**ಜನತಾದಳ**
**ಕೇವಲ**
**ಆರು ಸ್ಥಾನ**
**ಛೇ ಛೇ ಛೇ!**

**- ಎಚ್. ಡುಂಡಿರಾಜ್**

# ಕೈಲಾಸಂ - ಚಿಂತನೆಯ ನಯಾಗರ

– ಕೃಷ್ಣ ಸುಬ್ಬರಾವ್

ಭಾರತಕ್ಕೆ ಚಿಂತಕನೊಬ್ಬ ಅಧ್ಯಕ್ಷನಾಗಬೇಕೆಂಬುದು ಪಂಡಿತ ಜವಹರಲಾಲ್ ನೆಹರೂ ಅವರ ಆಸೆ. ಅದರ ಪರಿಣಾಮವೇ ಸರ್ವಪಳ್ಳಿ ರಾಧಾಕೃಷ್ಣ ಅಧ್ಯಕ್ಷರಾಗಿದ್ದು. ಅಂತಹ ಮೇಧಾವಿಯೊಬ್ಬರು, ಚಿಂತಕರು, ವೇದಾಂತವನ್ನು ಚೆನ್ನಾಗಿ ಓದಿದವರು ಕೈಲಾಸಂರವರನ್ನು ಒಂದೇ ಮಾತಿನಲ್ಲಿ ಇಡೀ ವ್ಯಕ್ತಿತ್ವವನ್ನು ಚಿಂತನೆಯ ನಯಾಗರ ಎಂಬ ಗುಣವಾಚಕದಿಂದ ವರ್ಣಿಸಿದ್ದಾರೆ. ನಯಾಗರವನ್ನಾಗಲಿ ಕೈಲಾಸಂರವರನ್ನಾಗಲಿ ಎದುರಿಗೆ ನೋಡುವ ಸೌಭಾಗ್ಯವಿಲ್ಲದಿದ್ದರೂ ಎರಡರ ಎತ್ತರಗಳ ಮಾಹಿತಿ ತಿಳಿದುಕೊಂಡು ನೋಡಿದವರು ಅವುಗಳನ್ನು ವಿವರಿಸುವುದನ್ನು ಕೇಳಿ ಚಿತ್ರಗಳಲ್ಲಿ ನೋಡಿ, ಈಗಲೂ ಆಶ್ಚರ್ಯಚಕಿತನಾಗುವ ಜನರಲ್ಲಿ ನಾನೂ ಒಬ್ಬ. ನಾಟಕಕಾರನಾಗಿ, ಹಾಸ್ಯದ ಮೂಲಕ ಸಮಾಜದ ಅನೇಕ ನ್ಯೂನತೆಗಳಿಗೆ, ಇಲ್ಲ ಸಲ್ಲದ ಆಡಂಬರಗಳಿಗೆ ಕನ್ನಡಿ ಹಿಡಿದವರು ಕೈಲಾಸಂ. ನಯಾಗರದಂತೆ ಯಾವಾಗಲೂ ರಭಸದಿಂದ ಸುರಿಯುತ್ತಿದ್ದವು ನುಡಿಮುತ್ತುಗಳು. ಕಿಡಿಗಳನ್ನು ಹಾರಿಸುತ್ತಿದ್ದರು. ಸುತ್ತಲುಮುತ್ತಲು ಇರುತ್ತಿದ್ದ ಕೆಲವರು ಅದನ್ನು ಹಿಡಿದು ಅಮೂಲ್ಯ ಆಸ್ತಿಯನ್ನಾಗಿ ಪರಿವರ್ತಿಸಿದರು ಎಷ್ಟೋ ನಷ್ಟವಾಗಿದೆ ಆದರೆ ಜಲಪಾತಕ್ಕೆ ಅದರ ಪರಿವೇ ಇಲ್ಲ. ಸಿಕ್ಕವರಿಗೆ ಸಿಕ್ಕಷ್ಟೇ ಲಾಭ.

ಇಂಗ್ಲೆಂಡ್ ದೇಶದಲ್ಲಿ ಆರು ವರ್ಷವಿದ್ದ ಕೈಲಾಸಂ ಬರ್ನಾಡ್ ಷಾ, ಆಸ್ಕರ್ ವೈಲ್ಡ್, ಗಾಲ್ಸ್ ವರ್ದಿ, ಷೇಕ್ಸ್‌ಪಿಯರ್ ಪ್ರಭಾವಕ್ಕೆ ಒಳಗಾದರು ಜೊತೆ ಜೊತೆಗೆ ಫುಟ್‌ಬಾಲಿನಲ್ಲಿ ಒಳ್ಳೇ ಗೋಲ್‌ಕೀಪರ್ ಆಗಿ ಹೆಸರು ಗಳಿಸಿದರು. ದೈಹಿಕ ಶ್ರೇಷ್ಠತೆ ಮತ್ತು ಬಲಗಳಿಗೆ ಹೆಸರಾಗಿದ್ದ ಸ್ಯಾಂಡೋ (ತೋಳಿಲ್ಲದ ನೆಟ್ ಬನಿಯನ್‌ಗೆ ಈಗಲೂ ಸ್ಯಾಂಡೋ ಬನಿಯನ್ ಎನ್ನುತ್ತೇವೆ) ಪರಿಚಯವಾಯಿತು. ಕೈಲಾಸಂಗೆ ದೈಹಿಕ ವ್ಯಾಯಾಮಕ್ಕೆ ಹೆಚ್ಚು ಒಲವಿತ್ತು. ಅಂತಹ ಸ್ಯಾಂಡೋ ಕೈಲಾಸಂ ರವರನ್ನು Mr. Skylasam ಎಂದು ಕರೆಯುತ್ತಿದ್ದರಂತೆ. ಹೆಸರನ್ನು ತಪ್ಪಾಗಿ ಸ್ಯಾಂಡೋ ಕರೆಯುತ್ತಿದರೂ, ಕೈಲಾಸಂರವರ ಪ್ರತಿಭೆಯ ಪ್ರಖರವಾದ ಪ್ರಭೆ ಪರಿಚಯವಾದವರಿಗೆ ಅವರ ಹೆಸರು Skylasam ಎಂಬುದೇ ಹೆಚ್ಚು ಅನ್ವರ್ಥವೆನಿಸುತ್ತದೆ. ಇತ್ತೀಚೆಗೆ ವೈ.ಎನ್.ಕೆ.ಯವರ ಬಳಿ ಕೈಲಾಸಂ ಬಗ್ಗೆ ಮಾತನಾಡುತ್ತಿದ್ದಾಗ "ಅಂತಪ ಚಿಂತಕ,

ಜೀನಿಯಸ್ ಇನ್ನೊಬ್ಬ ಹುಟ್ಟಿಲ್ಲ, ಅವರು ಯಾವುದರಲ್ಲಿ ಕಮ್ಮಿ ಆಗಿದ್ದರು, ಹಾಕಿ, ಫುಟ್‌ಬಾಲ್, ಹಾಡುಗಾರಿಕೆ ಹಾರ್ಮೋನಿಯಂ ಬಾರಿಸುವುದಲ್ಲಿ, ಸೈಕಲ್ ಸವಾರಿಯಲ್ಲಿ... ಹೀಗೆ ಎಲ್ಲಾದರಲ್ಲೂ ಎಕ್ಸ್‌ಪರ್ಟ್'' ಎಂದು ಬಣ್ಣಿಸಿದರು.

ಬಣ್ಣದ ಬಗ್ಗೆ ಅವರ ಜ್ಞಾನ ಎಷ್ಟು ಅಪಾರವಾಗಿತ್ತು ಎಂಬ ವಿಷಯವನ್ನು ಅವರಾಡಿದ ಎರಡು ಮಾತುಗಳಲ್ಲಿ ತಿಳಿದುಕೊಳ್ಳಬಹುದು ""Black makes a man look very compact although he may be broad. Gray ಬಣ್ಣದಲ್ಲಿ ತೆಳ್ಳಗಿದ್ದರೂ ಮನುಷ್ಯ ದಪ್ಪಗೆ ಕಾಣುತ್ತಾನೆ'' ಎನ್ನುತ್ತಿದ್ದರಂತೆ ಕೈಲಾಸಂ. ಸಂದರ್ಭಕ್ಕೆ ತಕ್ಕಾಗಿ ತಟ್ಟನೆ ಒಳ್ಳೊಳ್ಳೆ ಮಾತುಗಳು ಅವರಿಂದ ಹೊರ ಹೊಮ್ಮುತ್ತಿದ್ದವಂತೆ. ಕೈಲಾಸಂ ಬರೆಯದ 'ಕೈ' ಆದ ಬಗ್ಗೆ ಕೆಲವರು ಹೇಳುತ್ತಾರೆ. ಅವರಿಗೆ ತಲೆಯಲ್ಲಿ ಹೊಳೆಯುತ್ತಿದ್ದ ವಿಚಾರಗಳನ್ನು ಬರೆಯಲು ಅವರ ಕೈಗೆ ಆಗಲಿ ಅಥವಾ ಲೇಖನಿಗೆ ಸಾಧ್ಯವಾಗುತ್ತಿರಲಿಲ್ಲವಂತೆ. ಬಹುಶಃ ಹೀಗಾಗಿ ಅವರು ದೊಡ್ಡ Dictator ಆಗಿದ್ದು ಬರೆದುಕೊಂಡವರ ತಂಡವೇ ದೊಡ್ಡದಾಗಿತ್ತು. ಕೆ.ವಿ. ಅಯ್ಯರ್, ರಾ.ಶಿ., ಬಿ.ಎಸ್. ರಾಮರಾವ್, ತಿ.ತಾ. ಶರ್ಮ, ಭಾರತಿ, ರಾಜರತ್ನಂ. ಇ.ಆರ್. ಸೇತುರಾಮ್ ವೈ.ಎನ್.ಕೆ., ಹೀಗೆ ಅನೇಕ ಸಾಹಿತಿಗಳು ಕೈಲಾಸಂ, ವೈ.ಎನ್.ಕೆ. ನಾಟಕಗಳನ್ನು ಬರೆದುಕೊಂಡವರು ಅವರ ಪ್ರಕಟಣೆಗಳಿಗೆ ಕಾರಣ ಪುರುಷರು. ಮೈಸೂರಿನ ಸದ್ವಿದ್ಯ ಪಾಠಶಾಲೆಯಲ್ಲಿ ಕಾಲು ಕಳೆದುಕೊಂಡಿದ್ದ ಸುಬ್ಬು ಬರೆದುಕೊಳ್ಳುತ್ತಿದ್ದ ಅವನೇನಾದರೂ ಬೇಸರಪಟ್ಟುಕೊಂಡರೆ ''ಬರೆದುಕೊಳ್ಳೊ, ನಾನು ಸತ್ತಮೇಲೆ ಕೈಲಾಸಂ ಡೇ ಅಂತ ಮಾಡ್ತಾರೆ, ಆಗ ನೀನು ಹೋಗಿ ನಾನೇ ಅವನ್ನೆಲ್ಲಾ ಬರೆದಿದ್ದು ಅಂತಾ ಮೀಸೆ ತಿರುಗಿಸು'' ಅಂತಿದ್ದರಂತೆ. ಈಗಿನ ಪ್ರಶಸ್ತಿಗಳಿಸುವ ನೀತಿ ವಿಧಾನಗಳನ್ನು ಬಹುಶಃ ಕೈಲಾಸಂ ಆಗಲೇ ಗುರುತಿಸಿದ್ದಂತೆ ಕಾಣುತ್ತದೆ. ''ಖ್ಯಾತಿಗೂ ಕ್ಯೂ ನಿಲ್ಲಬೇಕು'' ಎಂದು ಆಗಾಗ್ಗೆ ಅವರ ಒಡನಾಡಿ ಅಡ್ವೊಕೇಟ್ ಸುಬ್ಬರಾಯರ ಹತ್ತಿರ ಹೇಳುತ್ತಿದ್ದರಂತೆ. ವರದಾಚಾರ್ಯರ ನಾಟಕಗಳಿಗೆ ಪ್ರತಿನಿತ್ಯ ಹೋಗಬೇಕು. ಹೋಗುತ್ತಿದ್ದುದು ನಾಟಕದಲ್ಲಿ ಬರುವ ಹಾಡಿಗೋಸ್ಕರ. ನಾಟಕದಿಂದ ಹೊರಬಂದಮೇಲೆ ಅದೇ ಮಟ್ಟಿನಲ್ಲಿ ಇಂಗ್ಲೀಷಿಗೆ ತರ್ಜುಮೆ ಮಾಡಿ ಸುಬ್ಬರಾಯರ ಮುಂದೆ ಹೇಳಿ ''ಹೇಗಿದೆ?'' ಅನ್ನುತ್ತಿದ್ದರಂತೆ. ಹೀಗೆ ಕೈಲಾಸಂಗೆ ಎಲ್ಲಕ್ಕೂ ಯಾರಾದರೂ ಜೊತೆ ಇರಬೇಕು. ನಿಂತ ಕಡೆ ಸಂತೆ ಸೇರಿಸಬಲ್ಲದು ಅವರ ಮಾತುಗಾರಿಕೆ. ಕೈಲಾಸಂಗೆ ಸರಿಯಾದ ಮನೆ ಇಲ್ಲ ನೆಲೆ ಇರಲಿಲ್ಲ ಎಂದರೆ ಅದು ಅವರೇ ಕೈಯಾರೆ ಮಾಡಿಕೊಂಡಿದ್ದು. ಶ್ರೀಮಂತ ಮನೆತನದಲ್ಲಿ ಹುಟ್ಟಿ,

''ಹುಟ್ಟುವಾಗಲೇ ಬೆಳ್ಳಿ ಚಮಚವನ್ನು ಬಾಯಲ್ಲಿ ಇಟ್ಟುಕೊಂಡು ಬಂದೆ ಅದು ನನಗೆ ಗಾಯ ಮಾಡಿತು'' (I was born with silver spoon and it hurt me) ಅನ್ನುತ್ತಿದ್ದರಂತೆ.

''ಪ್ರಪಂಚವನ್ನೆಲ್ಲಾ ನಗಿಸಿದವರು ನನ್ನೊಬ್ಬಳನ್ನು ಬಿಟ್ಟು'' ಎಂಬ ಮಾತನ್ನು ಕಮಲಮ್ಮ (ಕೈಲಾಸಂರವರ ಪತ್ನಿ) ಫ್ಯಾಮಿಲಿ ಸ್ನೇಹಿತರಾಗಿದ್ದ ಹೆಚ್. ಸುಬ್ಬರಾಯರಿಗೆ ಹೇಳುತ್ತಿದ್ದರಂತೆ. ಕೈಲಾಸಂರವರ ಸ್ನೇಹಿತರೂ ಆಗಿದ್ದ ಸುಬ್ಬರಾಯರು ''ಅವನೊಬ್ಬ ಜೀನಿಯಸ್, ಸಾಮಾನ್ಯರಂತೆ ಸಂಸಾರ ಕಟ್ಟುಹಾಕಲು ಸಾಧ್ಯವಿಲ್ಲ'' ಎಂದು ಸಮಾಧಾನ ಹೇಳುತ್ತಿದ್ದರಂತೆ. ಡಿ.ವಿ.ಜಿ. ಹೇಳುವ ಹಾಗೆ ಕೈಲಾಸಂ ಒಂದು ಹಕ್ಕಿ. ಸ್ವತಂತ್ರವಾಗಿ ಹಾರಾಡುವ ಹಕ್ಕಿ. ಡಿ.ವಿ.ಜಿ. ಅಂತಹ ಬುದ್ಧಿಶಾಲಿಗಳೇ ಕೈಲಾಸಂರವರನ್ನು ಕಾಡಾನೆಗೆ ಹೋಲಿಸುತ್ತಾರೆ. ಅತ್ತಿತ್ತ ನೋಡದೆ ತನ್ನ ಗುರಿಯಂತೆ ಮುನ್ನುಗ್ಗುವ ಮನೋಭಾವ ಎಂಬರ್ಥದಲ್ಲಿ ಹೋಲಿಸುತ್ತಾರೆ. ''ಹುಟ್ಟು ಕುರುಡರು ಆನೆಯನ್ನು ಒಂದೊಂದೇ ಅಂಗವನ್ನು ತಡವಿ ವಿವರಿಸುವಂತೆ ಕೈಲಾಸಂ ಅವರನ್ನು ಗುರುತಿಸಬಹುದು'' ಎನ್ನುವಾಗ ಒಬ್ಬ ಸಾಮಾನ್ಯ ಓದುಗ ಅಥವಾ ಒಬ್ಬ ಪ್ರೇಕ್ಷಕ ಕೈಲಾಸಂ ರವರನ್ನು ಕಂಡುಹಿಡಿಯುವುದು ಎಷ್ಟು ಸಾಧ್ಯವೆನಿಸುತ್ತದೆ. ಮಾಸ್ತಿ, ಅ.ನ.ಕೃ., ಶ್ರೀರಂಗ ಮುಂತಾದ ದಿಗ್ಗಜರು ಕೈಲಾಸಂ ಪ್ರಭಾವಕ್ಕೆ ಒಳಗಾದವರೆ. ಕೇವಲ ಒಬ್ಬ ಹಾಸ್ಯ ನಾಟಕಕಾರನಾಗಿದ್ದರೆ ಇಷ್ಟೊಂದು ಸೆಳೆತ ಹೇಗೆ ಸಾಧ್ಯವಾಗುತ್ತಿತ್ತು? ಹಾಸ್ಯ ಕೇವಲ ವಾಹಕ, ಸಂವಾಹನವಾಗಿತ್ತು. ಒಳ್ಳೊಳ್ಳೆ ಉಪದೇಶಗಳನ್ನು ಕೊಡುತ್ತಿದ್ದರು. ಹುಡುಕಿದವರಿಗೆ ಅದು ಸಿಗುತ್ತಿತ್ತು, ಈಗಲೂ ಸಿಗುತ್ತೆ, ವಿನೋದವೆ ಸಾಕೆಂಬುವರ ಕಣ್ಣನ್ನು ಅದು ಆಯಾಸಗೊಳಿಸಿದಂತೆ ಅವಿತುಕೊಂಡಿರುತ್ತದೆ. ಕೈಲಾಸಂ ಕೃತಿಗಳನ್ನು ಮುಖ್ಯವಾಗಿ ಎರಡು ವಿಭಾಗ ಮಾಡಬಹುದು (೧) ಸಮಾಜದ ಮುಖಕ್ಕೆ ಕನ್ನಡಿ ಹಿಡಿಯುವವು. (೨) ಮನುಷ್ಯನ ಮಹತ್ವವನ್ನು ಕಾಣಿಸುವಂಥವು.

ಶಾಲೆಯ ವಿದ್ಯಾರ್ಥಿಗಳಿಗಾಗಿ ಶಿವಮೊಗ್ಗದಲ್ಲಿ ಟೊಳ್ಳು-ಗಟ್ಟಿ ಒಂದು ಸಣ್ಣ ಸಂಭಾಷಣೆ ದೃಶ್ಯವಾಗಿ ಹೊರಬಿದ್ದು ನಂತರ ಅದು ಬೆಳೆಯಿತು. ಹೊರಗೆ ಗಟ್ಟಿಯಂತೆ ತೋರಿದರೂ ಒಳಗೆ ಟೊಳ್ಳು, ಹೊರಗೆ ಟೊಳ್ಳಿನಂತಿದ್ದರೂ ಒಳಗೆ ಗಟ್ಟಿಯಿರುವ ಎರಡು ಪಾತ್ರಗಳನ್ನು ಸೃಷ್ಟಿಸಿ ಏನೆಲ್ಲಾ ನೀತಿ ಬೋಧಿಸಿದರು ಕೈಲಾಸಂ. ಪೋಲಿ ಕಿಟ್ಟಿ ಅಂತಹ ಮರೆಯಲಾರದ Be-preparedಗಳನ್ನು ಸೃಷ್ಟಿಸಿದರು ''ಈ ಭೂಮೀಲಿ ಜೀವಿಸೋಕೆ ದೇವರಿಗೆ ನಾವು ಕೊಡಬೇಕಾದ

ಬಾಡಿಗೆ ಎಂದರೆ ಸುತ್ತಮುತ್ತಲೂ ಇರೋ ಜನರಿಗೆ ಉಪಯೋಗವಾಗಿರೋದೆ..." ಎಂಬಂತಹ ಮಾತುಗಳನ್ನು ಆಡಿದರು, ಆಡಿಸಿದರು ಪಾತ್ರಗಳ ಮೂಲಕ. ನೋವಿಲ್ಲದೆ ನಗುವನ್ನು ಉಕ್ಕಿಸುವ ಕೈಲಾಸಂ ನಾಟಕಗಳು ಬಹಳ ಕಮ್ಮಿ. ಮನುಷ್ಯರ ಫಾಲ್ಸ್‌ಪ್ರೆಸ್ಟೀಜ್, ದಪ್ಪಚರ್ಮ, ಮೂರ್ಖತನ, ಒರಟು ಅಲಕ್ಷ... ಇವೆಲ್ಲಾ ಅಂಶಗಳನ್ನು ಎತ್ತಿ ತೋರಿಸುತ್ತಿದ್ದರು. ಹಾಗೆಯೇ ಸರಳತೆ ಪರಸ್ಪರ ನಂಬಿಕೆ, ಸ್ಥಿತಿ, ವಿಶ್ವಾಸವನ್ನು ನಿರೂಪಿಸುತ್ತಿದ್ದರು. ಕೈಲಾಸಂ ನಾಟಕಗಳಲ್ಲಿ 'ದ್ವೇಷ'ಕ್ಕೆ ಸ್ಥಳವೇ ಇಲ್ಲ. ತಮ್ಮ ನಿಜ ಜೀವನದಲ್ಲೂ ಯಾರ ಮೇಲೂ ದೂರು ಹೇಳಿದವರಲ್ಲ. ತಮ್ಮನ್ನು ತಾವೇ ಪರಿಹಾಸ್ಯ ಮಾಡಿಕೊಳ್ಳುತ್ತಿದ್ದರಂತೆ. "I am the only black spot in this white house" ಅನ್ನುತ್ತಿದ್ದರಂತೆ. ವೈಟ್ ಹೌಸ್ ಕೈಲಾಸಂ ಮನೆ ಹೆಸರು. ತನ್ನನ್ನು ಮನೆಯಿಂದ ಅಟ್ಟಿದ ತಂದೆ ಬಗ್ಗೆ ದ್ವೇಷವಿಲ್ಲ, ಕಡೇ ತನಕ ಗೌರವವಿಟ್ಟುಕೊಂಡವರು, ಸತ್ತಾಗ ಮನೆಯಲ್ಲಿ ಬಹಳ ವರ್ಷಗಳಿಂದ ಅಡುಗೆ ಮಾಡುತ್ತಿದ್ದ ಕೃಷ್ಣನಿಗೆ ""you have more right to do the last rights" ಅಂತ ಚಿತೆಗೆ ಬೆಂಕಿ ಇಡಲು ಹೇಳಿದರಂತೆ. "No man is hero to his vallet' ಎಂಬ ಮಾತನ್ನು ಕೈಲಾಸಂ ಹಾಗೂ ಮನೆ ಅಡಿಗೆಯವರಾದ ಕೃಷ್ಣ ಸುಳ್ಳಾಗಿಸಿದರು. ಕೈಲಾಸಂ ಕೃತಿಗಳ ಅನೇಕ ಭಾಗಗಳನ್ನು ಬಾಯಲ್ಲೇ ಹೇಳುತ್ತಿದ್ದರಂತೆ ಫಾಲ್ಗಾಟ್ ಕೃಷ್ಣ. ಕೆ.ವಿ. ಅಯ್ಯರ್ ಒಳ್ಳೆ ಬರೆಹಗಾರರನ್ನಾಗಿ ಮಾಡಿದ್ದು ಕೈಲಾಸಂ.

ಪ್ರಾಸದ ಹುಚ್ಚು ಸ್ವಲ್ಪ ಹೆಚ್ಚಾಗಿತ್ತು ಎಂದು ಕೈಲಾಸಂ ಜೊತೆ ಓಡಾಡಿದವರು, ಅವರನ್ನು ಓದಿದವರು ಹೇಳುತ್ತಾರೆ. ಆದರೆ ಅವರ ಪದಗಳ ಪ್ರಯೋಗ ಪ್ರಾಸಕ್ಕೋಸ್ಕರ ಬಂದರೂ ಅರ್ಥ ಕಳೆದುಕೊಂಡು ಪೊಳ್ಳಾಗಿ, ಜೊಳ್ಳಾಗಿ ಇರುತ್ತಿರಲಿಲ್ಲವಂತೆ. 'ಪರಪಸ್'ನಲ್ಲಿ ಭೀಷ್ಮ ಅರ್ಜುನನಿಗೆ ಆಶೀರ್ವಾದ ಮಾಡುವ ಸಂದರ್ಭದಲ್ಲಿ ಬರುವ 'ಬ' ಕಾರ ಪ್ರಾಸ ಇಂಗ್ಲಿಷ್‌ನಲ್ಲಿ ನೋಡಿ

" - Blessings my budding bowman but you will never bloom into a better one unless you better the bearing of your body whilst at bow - craft.

ಕೈಲಾಸಂ ಈಗ ಎಷ್ಟು ಪ್ರಸ್ತುತ? ಎನ್ನುವ ಮಾತು ಯಾವಾಗಲೂ ಕೇಳುವ ಹಾಗಿಲ್ಲ - ಏಕೆಂದರೆ ಅವರದು ಸರ್ವಕಾಲಿಕ ಸತ್ಯ ಸಾಹಿತ್ಯ. ಏಕೆಂದರೆ ಅವರ ಹೋಂರೂಲು, ಬಂಡ್ವಾಳ್ವಿಲ್ಲದ ಬಡಾಯಿ, ಬಹಿಷ್ಕಾರ, ಸಾತು ತೌರ್ಮನೆ,

ಟೊಳ್ಳು-ಗಟ್ಟಿ... ಇವುಗಳಲ್ಲಿ ಬರುವ ಸಮಾಜ ಏನಾದರೂ ಬದಲಾಗಿದೆಯೆ? ಕೈಲಾಸಂ ಸೃಷ್ಟಿಸಿರುವ ಪಾತ್ರಗಳನ್ನು ಈಗಲೂ ನಾವು ಕಾಣುತ್ತೇವೆ ಮಹಾಭಾರತದಂತೆ ಕೈಲಾಸಂ ಯಾವಾಗಲೂ ಪ್ರಸ್ತುತ, ಆಕರ್ಷಕ, ಕೈಲಾಸಂ ಅವರಿಗೂ ಮಹಾಭಾರತ ಅತ್ಯಂತ ಪ್ರಿಯವಾದ ಗ್ರಂಥ. ಅತ್ಯಂತ ಶೋಷಣೆಗೆ ಒಳಗಾದ ಇಬ್ಬರು ವ್ಯಕ್ತಿಗಳೆಂದರೆ ಏಕಲವ್ಯ ಹಾಗೂ ಕರ್ಣ. ಇವರ ಫಲ ಎರಡು ಅದ್ಭುತ ನಾಟಕಗಳನ್ನು ಇಂಗ್ಲೀಷ್‌ನಲ್ಲಿ ಬರೆದರು. ಕೈಲಾಸಂರವರ ಕರ್ಣ ದ್ರೌಪದಿಯ ಮಾನಭಂಗ ಪ್ರಕರಣದಲ್ಲಿ ದುಶ್ಯಾಸನ ದ್ರೌಪದಿಯತ್ತ ಹೆಜ್ಜೆ ಇಟ್ಟಾಗ "ತಡೆ! ಒಂದು ಹೆಜ್ಜೆ ಇಟ್ಟರೆ ಸಾಯುವೆ!" ಎಂದು ಕೂಗುತ್ತಾನೆ. ಕರ್ಣನಂತಹ ವ್ಯಕ್ತಿ ಸಭೆಯಲ್ಲಿ ಅನ್ಯಾಯದ ವಿರುದ್ಧ ಪ್ರತಿಭಟಿಸದೆ ಮೂಕ ಪ್ರೇಕ್ಷಕನಾಗಿ ಕುಳಿತುಕೊಂಡಿರುವುದಾಗಲಿ ಅಥವಾ ಖಳನಾಯಕನಾಗುವುದನ್ನು ಕೈಲಾಸಂ ಸಹಿಸಲಿಲ್ಲ. 'ಕರ್ಣ' ಚಲನಚಿತ್ರವಾಗಲಿ ಎಂಬ ಬಯಕೆ ಬಹಳವಾಗಿತ್ತಂತೆ. ಆದರೆ ಕೈ-ಗೂಡಲಿಲ್ಲ.

ಸಾವಿನ ಬಗ್ಗೆ ಅವರಾಡುತ್ತಿದ್ದ ಮಾತು ಹಾಗೂ ಅವರು ಸತ್ತಿದ್ದನ್ನು ನೋಡಿದರೆ ಕೈಲಾಸಂ ಎಂತಹ ಗ್ರೇಟ್ ಫಿಲಾಸಫರ್ ಅನ್ನಿಸುತ್ತದೆ. ಕೆ.ವಿ. ಅಯ್ಯರ್ ಕೈಲಾಸಂರವರನ್ನು "ಆರೋಗ್ಯ ಕೆಟ್ಟಿರೋ ಹಾಗಿದೆ" ಎಂದಾಗ ಕೈಲಾಸಂ "Nearing the end ಮಗು, I feel it is not far off now. It is a glorious feeling, this thing death. Life after all is one long preparation for death" ಅಂದರಂತೆ. ಡಾ|| ಶಿವರಾಂ ಗೆ ಸಾವಿನ ಬಗ್ಗೆ ಹೇಳುತ್ತಾ "ನಮ್ಮ ಪ್ರಕಾರದಲ್ಲಿ ಸಾವನ್ನು ಗೆಲ್ಲುವುದಕ್ಕೆ ಅಷ್ಟೊಂದು ಪ್ರಾಮುಖ್ಯತೆ, ಪ್ರಶಂಸೆ ಏಕೆ ಕೊಡುತ್ತಾರೋ ನನಗೆ ಅರ್ಥವಾಗೊಲ್ಲ. ಮೃತ್ಯುಂಜಯ ಏಕೆ ಹೀರೋ ಆಗಬೇಕು? ನಾವು ಸಾವಿಗೆ ಏಕೆ ಹೆದರಬೇಕು. ಅದರ ವಿರುದ್ಧವೇಕೆ ಹೋರಾಡಬೇಕು? ಒಂದು ವೇಳೆ ಜಯಗಳಿಸಿದರೆ ಈ ಬ್ರಹ್ಮಾಂಡದಲ್ಲಿ ನೀನೊಬ್ಬನೆ ಏಕಾಂಗಿ ಆಗ್ತೀಯ. ಇದು ಒಳ್ಳೆಯ ಪ್ರಾಸಪೆಕ್ಟ್ ಅಂತಿಯಾ?" ಎಂದು ಕೇಳುತ್ತಿದ್ದರಂತೆ.

'ದಲಿತ' 'ಬಂಡಾಯ' ಮುಂತಾದವುಗಳನ್ನು ಆ ಹೆಸರುಗಳನ್ನು ಬಳಸದೆ ನಾಟಕದಲ್ಲಿ ತಂದವರು ಕೈಲಾಸಂ. purpose ನಾಟಕದಲ್ಲಿ ಸಾಕಷ್ಟು ಜಾತಿಗಳ ಬಗ್ಗೆ ಚಿಂತನೆಗಳಿವೆ. ಶೋಷಣೆಗಳ ಬಗ್ಗೆ ಬಂಡಾಯ ಎತ್ತಿದ ಮೊದಲ ವ್ಯಕ್ತಿ ಕೈಲಾಸಂ. ಸ್ತ್ರೀ ಶೋಷಣೆಯನ್ನು ತಮ್ಮ ನಾಟಕದಲ್ಲಿ ಆಡಿ ತೋರಿಸಿದರು. ನಾಗತ್ತೆ, ಬೋರ ಅಂತಹವರನ್ನು ವೇದಿಕೆಯ ಮೇಲೆ ತಂದರು. ಆಡುವ ಭಾಷೆಯಲ್ಲಿ ಸಾಹಿತ್ಯ

ರಚಿಸಿದರು. ಜನರನ್ನು ತಲುಪಿದರು. ನಾಟಕ ಬರೆದು ಕೂರಲಿಲ್ಲ ತಾವೇ ಆಡಿ ತೋರಿಸಿದರು. ಈಗಲೂ 'ಕೈಲಾಸಂ'ನ್ನು ನುರಿತವರಿಂದ ಕೇಳಿ ಕಲಿಯಬೇಕು, ಅವರ ನಾಟಕವನ್ನು ಚೆನ್ನಾಗಿ ಆಡುವವರನ್ನು ನೋಡಿ, ಕೇಳಿ, ಆನಂದಪಡಬೇಕು. ನೇರವಾಗಿ ಓದುವುದು ಎಲ್ಲರಿಗೂ ಕಷ್ಟವಾಗುವುದು. ಭಾಷೆಯ ಬಂಧನಕ್ಕೆ ಅವರು ಒಳಗಾಗಲಿಲ್ಲ. ತಮಿಳು, ಕನ್ನಡ, ತೆಲುಗು, ಮಲೆಯಾಳಂ, ಇಂಗ್ಲೀಷ್ ಹೀಗೆ ಎಲ್ಲಾ ಬೆರೆಸಿದರು. ಕೈಲಾಸಂ ನಾಟಕಗಳಲ್ಲಿರುವ ಚಿಂತನೆಗಳನ್ನು ಕುರಿತು ಕ್ಷಣಕಾಲ ಯೋಚಿಸಿದರೆ ಅವುಗಳು ಸೃಜನಶೀಲವೇ, ಸೃಜನೇತರ ಸಾಹಿತ್ಯವೇ ಹೇಳುವುದು ಕಷ್ಟವಾಗುತ್ತೆ. ಎಷ್ಟೋ ವಿಮರ್ಶಕರು ಅದು ಸಾಹಿತ್ಯವೆ? ಎಂದೂ ಕೇಳಬಹುದು. ಆದರೆ ಕೈಲಾಸಂ ಬಗ್ಗೆ ಶಿಕ್ಷಣ ತಜ್ಞ ಮಹಾ ಮೇಧಾವಿ ಸಿ.ಆರ್.

ರೆಡ್ಡಿ ಹೇಳಿದ ಮಾತು ಇದು "As a humourist and Satirist, he has few equals. In the Kannada country I suppose he occupies a unique position, he is a solitary one with none to keep him company except as audience" ''ಅದೊಂದು ಅಮೂಲ್ಯ ವಜ್ರ'' ಎಂದರಂತೆ ಕೈಲಾಸಂರವರ ಚೊಚ್ಚಲ ಹಾಗು ಕಡೆ ಕೃತಿಗೆ ಮುನ್ನುಡಿ ಬರೆದ ರೆಡ್ಡಿಯವರು.

''ನನ್ನ ಬಗ್ಗೆ ಮಾತಾಡಬೇಡಿ ನನ್ನ ಕೃತಿಗಳ ಬಗ್ಗೆ ಮಾತನಾಡಿ'' ಎಂದು ಆಗಾಗ್ಗೆ ಹೇಳುತ್ತಿದ್ದರಂತೆ ಕೈಲಾಸಂ. ಅದಕ್ಕೆ ಅವರ ಕ್ಷಮಾಪಣೆ ಹಾಗೂ ಓದುಗರ ಅಪ್ಪಣೆ ಕೇಳುತ್ತೇನೆ.

## ಥಳುಕು - ತುಣುಕು

ಬಲದ ಕಡೆ ಹುಬ್ಬು ಹಾರಿದರೆ ಮದುವೆಯಾಗುತ್ತೆ ಎಂದು ಹೆಬ್ಬಿಗುಬ್ಬಾಲೆಯಲ್ಲಿ ಪ್ರಾಯಸ್ಥರೆಲ್ಲರೂ ನಂಬುತ್ತಾರೆ.

ಪ್ರಪಂಚದ ಮಿಕ್ಕೆಲ್ಲ ಕಡೆಗಳಲ್ಲೂ ಬಲ ಹುಬ್ಬು ಹಾರಿದರೆ ಒಳ್ಳೆಯದಾಗುತ್ತೆ ಎಂದು ಹಿರಿಯರೆಲ್ಲರೂ ನಂಬುತ್ತಾರೆ.

# ನೆನಪುಗಳ ರಾಶಿ

**- ಎಸ್.ಎನ್. ಶಿವಸ್ವಾಮಿ**

ರಾ.ಶಿ.ಯವರ ಬಗ್ಗೆ ಬರೆಯುತ್ತ ಹೋದಹಾಗೆ ಒಂದರ ಮೇಲೊಂದಾಗಿ ನೆನಪುಗಳು ಅಲೆಅಲೆಯಾಗಿ ನನ್ನ ಮನಸ್ಸನ್ನು ಆಕ್ರಮಿಸಿಕೊಂಡು ಬರುತ್ತವೆ. ಅವರ ವ್ಯಕ್ತಿತ್ವವೇ ಅಷ್ಟು ವಿಸ್ತಾರ, ಪರಿಪೂರ್ಣ, ವೈವಿಧ್ಯಮಯ, ವೃತ್ತಿಪರ ವೈದ್ಯ, ವೈದ್ಯಕೀಯ ಶಿಕ್ಷಣ, ಚಿಂತಕ, ಸಮಾಜಸೇವಕ, ತತ್ವಜ್ಞಾನಿ, ಮನಶ್ಶಾಸ್ತ್ರ ಪರಿಣಿತ, ಹಾಸ್ಯಲೇಖಕ, ಸಂಪಾದಕ, ಇವೆಲ್ಲಕ್ಕಿಂತ ಮಿಗಿಲೆನಿಸಿ ಸರಳ ಸ್ನೇಹ ಜೀವಿ, ಸಹೃದಯ ಸಂಸಾರಿ.

ಡಾಕ್ಟರ್ ಎಂ. ಶಿವರಾಂ ಅಂತಲೇ ನನಗೆ ಅವರ ಮೊದಲ ಪರಿಚಯ. ಅವರು ನಮ್ಮ ಚಿಕ್ಕಜ್ಜಿ, ಮೀನಾಮಣಿಯಮ್ಮನವರ ಮನೆಡಾಕ್ಟರು. ಮಲ್ಲೇಶ್ವರದಲ್ಲಿದ್ದ ಮಿನಾಮಣಿಯಮ್ಮನವರ ಬಂಗಲೆಯ ಹೊರಮನೆಯೊಂದರಲ್ಲಿ ಆಗ ನಾವಿದ್ದೆವು. ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದೆ. ಅಜ್ಜಿಯವರ ಅಲ್ಲಿನ ಕುಟುಂಬದಲ್ಲಿ ನಾನೇ ಹಿರಿಯ ಹುಡುಗನಾಗಿದ್ದರಿಂದ ಅವರ ಮನೆಯ ತುರ್ತು ಕಾರ್ಯಗಳಲ್ಲೆಲ್ಲ ನಾನೇ ನೆರವಾಗುತ್ತಿದ್ದೆ. ಯಾರಿಗೆ ಏನಾದರೂ ಖಾಯಿಲೆಯೆಂದರೆ ಮೊದಲು ನಾವು ಡಾಕ್ಟರ್ ಶಿವರಾಂ ಅವರನ್ನು ಕಾಣುತ್ತಿದ್ದೆವು. ಶಿವರಾಂ ಅವರು ಆಗ ಸಂಪಿಗೆ ರಸ್ತೆಯಲ್ಲಿ ಬಾಡಿಗೆ ಮನೆಯಲ್ಲಿದ್ದರು. ನಾನು ಆ ಮನೆಗೆ ಹೋಗಿ ಬಂದದ್ದು ಎಷ್ಟೋ ಸಾರಿ. ಯಾವಾಗಲೆಂದರೆ ಆವಾಗ. ಸರಿರಾತ್ರಿಯಲ್ಲೂ ಹೋಗಿ ಡಾಕ್ಟರ್ ನಿದ್ದೆಗೆಡಿಸಿ ಕರೆದುಕೊಂಡು ಬರುತ್ತಿದ್ದೆ, ಅವರೋ ಮಾನವತೆಯ ಸ್ವರೂಪ! ಅವರ ದಯೆ, ಅನುಕಂಪ, ಕರುಣೆ, ಇಷ್ಟರಿಂದಲೇ ರೋಗಿಯ ಅರ್ಧ ಖಾಯಿಲೆಯೆಲ್ಲ ವಾಸಿಯಾಗಿ ಹೋಗುತ್ತಿತ್ತು.

ಮೊಟ್ಟಮೊದಲು ನಾನು ಅವರನ್ನು ಕಂಡಾಗ ಅವರ ಎತ್ತರದ ನಿಲುವು, ಚೌಕಮುಖ, ಕಿವಿಯ ಹೊರಕ್ಕೆ ಚಾಚಿದ ಕೂದಲು, ಬಟ್ಟಲುಗಣ್ಣು, ಅಲ್ಲದೆ ಅವರೇ ಒಂದು ಕಡೆ ವರ್ಣಿಸಿಕೊಂಡಹಾಗೆ ಕಂಬಳಿ ಹುಳುವಿನಂತೆ ದಟ್ಟವಾದ ಹುಬ್ಬು, ಇವುಗಳ ನಡುವೆ ಎದ್ದು ಕಾಣುತ್ತಿದ್ದ ಅವರ ಸೌಮ್ಯತೆ, ಸ್ನಿಗ್ಧ ಮುಖಭಾವ, ನಾನೊಬ್ಬ ಅತಿ ವಿಶೇಷ ಮಾನವನ ಎದುರಿಗೆ ನಿಂತಿದ್ದೇನೆನ್ನುವುದರ ನೆನಪು ಮಾಡಿಕೊಟ್ಟವು. ಸಂಪಿಗೆ ರಸ್ತೆಯ ಅವರ ಮನೆಗೂ ಬಳೇ ಪೇಟೆಯ

ಅವರ ವೈದ್ಯಶಾಲೆಗೂ ನಾನು ಆಗಾಗ್ಗೆ ಹೋಗಿ ಬರುತ್ತಿದ್ದದ್ದರಿಂದ ನನಗೆ ರಾ.ಶಿ. ಅವರ ಪರಿಚಯ ''ಕೊರವಂಜಿ''ಗೆ ಮುಂಚೆಯೇ ಆಗಿತ್ತೆನ್ನಬಹುದು.

''ಕೊರವಂಜಿ''ಯ ಉಗಮವಾದಮೇಲೆ ನನಗೆ ರಾ.ಶಿ.ಯವರ ಹಾಸ್ಯ ಪ್ರವೃತ್ತಿಯ ಪರಿಚಯವಾಯಿತು. ಕ್ರಮೇಣ ರಾ.ಶಿ. ಅನ್ನುವ ಅನ್ವರ್ಥನಾಮದಲ್ಲಿ ಅವರು ಬರೆಯುತ್ತಿದ್ದ ಲೇಖನಗಳನ್ನೂ ಓದಿ ನಾನು ಅವರ ದೊಡ್ಡ ಅಭಿಮಾನಿಯಾದೆ. ಟಿ.ಪಿ. ಕೈಲಾಸಂ ಆಗ ನನ್ನ ಅತಿ ಮೆಚ್ಚಿನ ಲೇಖಕರು; ರಾ.ಶಿ. ಅವರ ಹತ್ತಿರದ ಗೆಳೆಯ. ಕೈಲಾಸಂ ತಮ್ಮ ಮೇಲೆ ಬೀರಿದ ಪ್ರಭಾವವನ್ನು ರಾ.ಶಿ. ನೆನಪು ಮಾಡಿಕೊಂಡು ಬರೆದಿದ್ದಾರೆ. ಕೈಲಾಸಂ ಹಾಗೂ ತಮ್ಮ ಇನ್ನೊಬ್ಬ ಗೆಳೆಯ ಜಿ.ಪಿ. ರಾಜರತ್ನಂ ಅವರುಗಳ ಬಗ್ಗೆ ರಾ.ಶಿ. ಪುಸ್ತಕಗಳನ್ನು ಬರೆದಿದ್ದಾರೆ. ಅವರೆಲ್ಲರಿಗಿಂತ ನಾನು ಬಹಳ ಚಿಕ್ಕವನಾಗಿದ್ದರಿಂದ ದೂರದಲ್ಲೇ ನಿಂತು ಅವರ ಮಾತುಕತೆಗಳನ್ನು ಕೇಳಿಸಿಕೊಳ್ಳುತ್ತ ಅವರ ಹಾಸ್ಯ, ಮೈತ್ರೀಗುಣಗಳನ್ನು ಮೆಚ್ಚಿಕೊಳ್ಳುತ್ತಿದ್ದೆ.

ರಾ.ಶಿ.ಯವರ ಜ್ಞಾನದಾಹ, ಜೀವನೋತ್ಸಾಹ ಅಪಾರ. ಒಬ್ಬ ಮನುಷ್ಯನ ಜೀವಮಾನದಲ್ಲಿ ಎಷ್ಟೊಂದು ಬೇರೆ ಬೇರೆ ವಿಷಯಗಳ ಆಳವಾದ ಅಧ್ಯಯನ ಸಾಧ್ಯ ಅನ್ನುವುದನ್ನು ನಾನು ಅವರಿಂದ ಅರಿತುಕೊಂಡೆ. ಅವರ ನಾನಾ ರೂಪದ ಸಾಹಿತ್ಯ ಸೃಷ್ಟಿಯೂ ಅವರ ಅಧ್ಯಯನದಷ್ಟೇ ವಿಪುಲ. ನನಗೆ ತಿಳಿದಂತೆ ಅವರು ಮೂವತ್ತು ನಲವತ್ತು ಪುಸ್ತಕಗಳನ್ನಾದರೂ ಬರೆದರು. 'ನನಗೆ ತಿಳಿದಂತೆ' ಎನ್ನುವುದಕ್ಕೆ ಕಾರಣ, ನಾನು ಬೆಂಗಳೂರಿನಿಂದ ವರ್ಗವಾಗಿ ಹೊರಟು ಹೋದಮೇಲೆ ಅವರು ಬರೆದ ಎಷ್ಟೋ ಪುಸ್ತಕಗಳನ್ನು ನಾನು ಓದಲಾಗಲಿಲ್ಲ. ಅಲ್ಲಿಯವರೆಗಿನ ಅವರ ಹಾಸ್ಯಲೇಖನಗಳು, ಹಾಸ್ಯ ಪುಸ್ತಕಗಳನ್ನಷ್ಟೆ ನಾನು ಓದಿದ್ದೆ. 'ಕೊರವಂಜಿ'ಯಲ್ಲಿ ಪ್ರಕಟವಾಗುತ್ತಿದ್ದ ''ಜಗ್ಗೋಜಿ ಕತೆಗಳು'', ಆಮೇಲಿನ ಸಂಕಲನಗಳಾದ ''ತುಟಿಮೀರಿದುದು'', ''ಕೊರಂವಜಿ ಕಂಡ ನಗೆ ದರ್ಬಾರಿಗಳು'', ''ಕೊರವಂಜಿ ಕಂಡ ನಗು ಸಮಾಜ'', ''ಥಳುಕು - ತುಣುಕು'', ''ಕೆಣಕೋಣ ಬಾರ'' ಇವುಗಳೆಲ್ಲ ಓದುಗರನ್ನು ನಕ್ಕು ನಲಿಯುವಂತೆ ಮಾಡಿ ಅವರ ಅನಾರೋಗ್ಯವೇನಿದ್ದರೂ ಅದನ್ನು ಗುಣಪಡಿಸಲು ಸಮರ್ಥವಾಗಿದ್ದವು. ಈ ಸಂಕಲನಗಳನ್ನು ಈಗಿನ ಹಾಸ್ಯಪ್ರೇಮಿಗಳೂ ಸಂಪಾದಿಸಿಕೊಂಡು ತಲೆದಿಂಬಿನ ಪಕ್ಕದಲ್ಲೇ ಇಟ್ಟುಕೊಂಡು ಬಾರಿಬಾರಿಗೆ ಓದಬೇಕು.

ನಾನು ನಿವೃತ್ತನಾಗಿ ಬೆಂಗಳೂರಿಗೆ ಹಿಂದಿರುಗಿದ ಮೇಲೆ ನನಗೆ ರಾ.ಶಿ.ಯವರ ''ಮನೋನಂದನ'', ''ಮನಮಂಥನ'' ಇಂಥ ಮಾನಸಿಕ ಆತಂಕಗಳನ್ನು ವಿವರಿಸುವ, ಮನಸ್ಸಿನ ಒತ್ತಡಗಳು, ಭ್ರಾಂತಿ ಮೊದಲಾದ ವೈಪರೀತ್ಯಗಳನ್ನು ವಿಶ್ಲೇಷಿಸುವ, ಮನಸ್ಸನ್ನು ಆರೋಗ್ಯವಾಗಿ ಹತೋಟಿಯಲ್ಲಿಟ್ಟುಕೊಳ್ಳುವ ಮಾರ್ಗದರ್ಶನ ಮೂಡಿಸುವಂಥ ಅಮೂಲ್ಯ ಆಧಾರ ಗ್ರಂಥಗಳು ನನ್ನ ಗಮನ ಸೆಳೆದವು. ಅವರ ''ಕಾಲ'' ಎಂಬ ಪುಸ್ತಕ ಅದ್ಭುತವಾದದ್ದು. ಭೌತಶಾಸ್ತ್ರ ಸಿದ್ಧಾಂತಗಳ ಮನೋವಿಜ್ಞಾನದ ಅನುಭವವೂ ಈ ಪುಸ್ತಕಗಳನ್ನು ರೂಪಿಸಿದೆ.

ಇವಲ್ಲದೆ, ರಾ.ಶಿ.ಯವರ ವೈಯಕ್ತಿಕ ಅನುಭವಗಳ ಪಾಕ ಇಳಿಸಿದ ''ಸಾಕ್ಷಿ ಸಂಕಲಿಕೆ'', ಸಣ್ಣ ಕತೆಗಳ ಸಂಗ್ರಹ ''ಮೃಗಶಿರ'', ದೆವ್ವ ಪಿಶಾಚಿಗಳ ಬಗ್ಗೆ ಸ್ವಾರಸ್ಯಕರವಾಗಿ ಹೇಳಿದ ''ಅಂಚೆ ಪೇದೆಯ ಅಂತರ್ ಹೆಂಡತಿ'' ಆರು ಗಂಭೀರ ಕತೆಗಳ ಗುಚ್ಛ ''ಪಶ್ಯಾಮಿ ಕತೆಗಳು'' ಚಾರಿತ್ರಿಕ ಹಿನ್ನೆಲೆಯ ''ಪಂಪಾಪತಿಯ ಕೃಪೆ'' ಹಾಗೂ ಕಥಾಲೋಕದಲ್ಲೇ ಹೊಸ ರೀತಿಯ ''ನಗು ಸರಸಿ ಅಪ್ಸರೆಯರು'' ಈ ಪುಸ್ತಕಗಳೆಲ್ಲ ನನ್ನ ಅಚ್ಚುಮೆಚ್ಚಿನವು. ಆದರೆ ವಿಷಾದನೀಯ ಸಂಗತಿಯೆಂದರೆ, ಉತ್ತಮ ಕನ್ನಡ ಬರೆಹಗಳ ಮಾದರಿಗಾಗಿ ಯಾರಿಗಾದರೂ ತೋರಿಸೋಣ ಎನ್ನುವುದಕ್ಕೆ ಇವುಗಳೆಲ್ಲಹಸ್ತಾಂತರ ಹೊಂದಿ ಕಾಣೆಯಾಗಿವೆ. ಕೆಲವು ಬರಹಗಳ ತಿರುಳೂ ಮರೆತಿದ್ದೇನೆ.

ಕನ್ನಡಕ್ಕೆ ರಾ.ಶಿ.ಯವರ ಇನ್ನೊಂದು ಶ್ರೇಷ್ಠ ಕೊಡುಗೆಯೆಂದರೆ ಅವರು ಅಕ್ಕರೆಯಿಂದ, ಉತ್ಸಾಹದಿಂದ ಹುಟ್ಟು ಹಾಕಿ ಬೆಳೆಸಿದ ನಗೆ ಮಾಸಿಕ ''ಕೊರವಂಜಿ'' ಅದರಲ್ಲಿ ನಗೆ ಲೇಖನಗಳನ್ನು ರಾ.ಶಿ. ತಾವೂ ಬರೆದರು. ರಾಜರತ್ನಂ, ಕಸ್ತೂರಿ, ಗೊರೂರು ಇವರೆಲ್ಲರನ್ನೂ ಹುರಿದುಂಬಿಸಿ ಲೇಖನ ಬರೆಸಿದರು. ಹೊಸ ಹೊಸ ಲೇಖಕರಿಗೆ ಉತ್ತೇಜನ ಕೊಟ್ಟು ಹಾಸ್ಯ ಸಾಹಿತ್ಯ ಸಲೆ ಬತ್ತದಂತೆ ನೋಡಿಕೊಂಡರು. ಇಂದೂ ''ಕೊರವಂಜಿ'' ಲೇಖಕರಲ್ಲನೇಕರು ಹಾಸ್ಯ ಸಾಹಿತ್ಯಕ್ಕೆ ತಮ್ಮ ಕಾಣಿಕೆ ಅರ್ಪಿಸುತ್ತಲೇ ಇದ್ದಾರೆ. ನಾನು ''ಕೊರವಂಜಿ''ಗೆ ಬರೆಯತೊಡಗುವ ವೇಳೆಗೆ ರಾ.ಶಿ.ಯವರು ಮನೆ ಬದಲಾಯಿಸಿ ಮಲ್ಲೇಶ್ವರದ ಆರನೇ ಮುಖ್ಯರಸ್ತೆಗೆ ಬಂದಿದ್ದರು. ಈ ಮನೆ ನಮ್ಮ ಮನೆಯ ಹತ್ತಿರವೇ ಇದ್ದುದರಿಂದ ನಾನು ಬರೆದ ಲೇಖನಗಳನ್ನು ಮುಖತಃ ಅವರಿಗೆ ಕೊಟ್ಟು ಬರಲು ಅನುಕೂಲವಾಯಿತು. ಆಗಲೆಲ್ಲ ಅವರು ನನ್ನಂಥ ಕಿರಿಯ ಬರಹಗಾರನಿಗೆ ತೋರಿಸಿದ ಸೌಜನ್ಯ ಎಷ್ಟೊಂದು ಹೇಳತೀರದು. ನನ್ನ ಹಸ್ತಪ್ರತಿಗಳನ್ನು

ನಿಂತನಿಲುವಿನಲ್ಲೇ ಓದಿ ನನ್ನ ಬೆನ್ನು ತಟ್ಟಿ ''ಇನ್ನೂ ಬರಿ. ಎಷ್ಟು ಬೇಕಾದರೂ ಬರಿ'' ಅಂತ ಹೇಳಿ ನನ್ನ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತಿದ್ದರು. ವಿಶ್ವಾಸದಿಂದ ಕಾಫಿ ತಿಂಡಿಗಳನ್ನು ಕೊಟ್ಟು ಕಳಿಸುತ್ತಿದ್ದರು. ಆಮೇಲೆ ನನ್ನ ಕೆಲವು ಲೇಖನಗಳ ಸಂಕಲನವಾಗಿ ನನ್ನ ಮೊಟ್ಟ ಮೊದಲನೆಯ ಪುಸ್ತಕ ''ಎನ್ನವಳ್ಳಿಯಲ್ಲಿ ಲಾಲಿಪೊಪ್ಸ್'' ಮುದ್ರಣಕ್ಕೆ ಸಿದ್ಧವಾದಾಗ ಅದಕ್ಕೊಂದು ಸುಂದರವಾದ ಮುನ್ನುಡಿಯನ್ನು ರಾ.ಶಿ. ಬರೆದುಕೊಟ್ಟರು.

''ಕೊರವಂಜಿ'' ರಿಟೈರಾದ ಮೇಲೆಯೂ ರಾ.ಶಿ.ಯವರು ''ಮಯೂರ''ದಲ್ಲಿ ''ತಿಂಗಳ ತಿಳಿಗಾಳು'' ಅಂಕಣ ಬರೆದರು; ತಮ್ಮ ನಗೆ ಬುಗ್ಗೆಯಿಂದ ನಮಗೆ ಹಾಸ್ಯದ ಹಬ್ಬ ಮಾಡುತ್ತಿದ್ದರು. ಅವರದು ಚುರುಕಾದ, ಹಗುರವಾದ ಹಾಸ್ಯ. ನಮ್ಮನ್ನು ನಾವೇ ನೆನಸಿಕೊಂಡು ನಗಲು ಪ್ರಚೋದಿಸುವ ಹಾಸ್ಯ. ಸಾಮಾಜಿಕ, ರಾಜಕೀಯ, ಔದ್ಯೋಗಿಕ ಕ್ಷೇತ್ರಗಳಲ್ಲೆಲ್ಲೂ ನಗೆಪಾಟಲಾಗುವ ವ್ಯಕ್ತಿಗಳ, ಸನ್ನಿವೇಶಗಳ ವಿಡಂಬನೆಯೇ ಅವರ ಈ ಅಂಕಣಗಳು, ಹಾಗೂ ''ಕೊರವಂಜಿ'' ಅಂಕಣಗಳಾಗಿದ್ದ ''ಕುಹಕಿಡಿಗಳು'' ''ಉರಿಗಾಳು'' ಇವುಗಳ ಗುರಿಯಾಗಿತ್ತು. ಅವರ ಊಹಾ ಪ್ರಪಂಚದಲ್ಲಿ ಸೃಷ್ಟಿಯಾದ ''ಹೆಬ್ಬಿಗುಬ್ಬಾಲೆ''ಯ ''ಮಿಟಕಲಾಡಿ ಮೀನಾಕ್ಷಿ'' ''ಅರವಾಮೊದ್ದು'' ಇವರುಗಳು ರಾ.ಶಿ.ಯವರ ಹಾಸ್ಯ ಪ್ರವಾಹದಲ್ಲಿ ಕೊಚ್ಚಿಕೊಂಡು ಬಂದು ಶಾಶ್ವತವಾಗಿ ನನ್ನ ''ಮನೋನಂದನ''ದಲ್ಲಿ ನೆಲೆಸಿದ್ದಾರೆ.

**ಸತ್ಯ**

**ಈ ಜಗತ್ತಿನಲ್ಲಿ ಎಲ್ಲವೂ ಸತ್ಯ**
**ಯಾವುದೂ ಸುಳ್ಳಲ್ಲ**
**ಸತ್ಯವಲ್ಲದ್ದು**
**ಸುಳ್ಳಂತೀರಾ?**
**ಅದೂ ಸುಳ್ಳಲ್ಲ!**

**– ಎಚ್. ಡುಂಡಿರಾಜ್**

ಶುಭಾಶಯಗಳೊಂದಿಗೆ

**ಅಪರಂಜಿ ಅಭಿಮಾನಿ**

ಅಪರಂಜಿ - ಹಾಸ್ಯೋತ್ಸವದ
ಸವಿನೆನಪಿಗೆ

**ಹಿತೈಷಿಯ ಕಿರುಕಾಣಿಕೆ**

# ವ್ಯಂಗ್ಯ ಚಿತ್ರಕಾರ - ನಾನು ಕಂಡಂತೆ

(ರಾಶಿಯವರ ಅಪ್ರಕಟಿತ ಲೇಖನಗಳ ರಾಶಿಯಿಂದ)

– ರಾ. ಶಿ.

ಆಗ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಚಾರ್ಲಿ ಚಾಪ್ಲಿನ್‌ರ Gold Rush ಮೂಕ ಚಿತ್ರವನ್ನು ನೋಡಿ ಬಲು ಮೆಚ್ಚಿಕೊಂಡಿದ್ದೆ. ೧೯೨೫ ಕ್ರಿಸ್ತವರ್ಷ... ಪಂಚ್ ವಾರ ಪತ್ರಿಕೆಯನ್ನು ಅತ್ಯಂತ ಖುಷಿಯಿಂದ ಕಾಲೇಜು ರೀಡಿಂಗ್ ರೂಮಿನಲ್ಲಿ ಓದುತ್ತಿದ್ದೆ ಹಾಗೂ ನೋಡಿ ಮೆಲಕು ಹಾಕುತ್ತಿದ್ದೆ. frank raynolds ಚಿತ್ರಿಸಿದ ವ್ಯಂಗ್ಯ ಚಿತ್ರವಿತ್ತು. ಆಗ ಫ್ರಾನ್ಸ್ ಸರ್ಕಾರವು ಆರ್ಥಿಕವಾಗಿ ಹೀನ ಸ್ಥಿತಿಯಲ್ಲಿದ್ದು ಅಮೆರಿಕಾದಿಂದ ನೆರವು ಪಡೆಯಲು ಪ್ರಯತ್ನಿಸುತ್ತಿತ್ತು. ತನ್ನ ಚಿತ್ರದಿಂದ ಚಾಪ್ಲಿನ್ ಅಮೆರಿಕಾದಲ್ಲಿ ಬೊಗಸೆ ಬೊಗಸೆ ಹಣ ಪಡೆದಿದ್ದ. ವ್ಯಂಗ್ಯ ಚಿತ್ರದಲ್ಲಿ ಇವೆಲ್ಲಾ ಸಂಗತಿಗಳೂ ನೋಡಿದ ಕೂಡಲೇ ಸ್ಪಷ್ಟವಾಗುತ್ತಿತ್ತು. A cartoon is the leader to the illiterate or very busy person ಎಂದು ಹಿರಿಯರೊಬ್ಬರು ಅಂದಿದ್ದು ಎಷ್ಟು ನಿಜ! ಅನ್ನಿಸಿತು. ಚಾಪ್ಲಿನನ್ನು ಪ್ರಶಂಸಿಯೂ ಆಯಿತು. ಫ್ರಾನ್ಸಿನ ಸ್ಥಿತಿಯನ್ನು ಸೂಚಿಸಿದ್ದೂ ಆಯಿತು. ಆದುದರಿಂದಲೇ ವ್ಯಂಗ್ಯ ಚಿತ್ರಗಳನ್ನು ಬಲು ಮೆಚ್ಚಿಕೊಳ್ಳುತ್ತಿದ್ದೇನೆ. ರಾಜಕೀಯ ವಿಷಯಗಳಲ್ಲಿ Low, ಸಾಮಾಜಿಕ ವಿಷಯಗಳಲ್ಲಿ Arthur watts, fongasse, Dowd, ಮತ್ತಿತರರು ಅದೆಷ್ಟು ಅರ್ಥಪೂರ್ಣವಾದ ಖುಷಿ ಕೊಡುವ ವ್ಯಂಗ್ಯ ಚಿತ್ರಗಳನ್ನು ಬರೆಯುತ್ತಿದ್ದರು ಅಂತ!

ನಮ್ಮ ದೇಶದಲ್ಲಿನ ಪತ್ರಿಕೆಗಳಲ್ಲಿ ಈ ತೆರನ ವ್ಯಂಗ್ಯ ಚಿತ್ರಗಳು ಕಾಣಬರುತ್ತಿರಲಿಲ್ಲ. ಅದರಲ್ಲೂ ಕನ್ನಡದಲ್ಲಿ ಪತ್ರಿಕೆಗಳೇ ವಿರಳವಾಗಿದ್ದಾಗ, ವ್ಯಂಗ್ಯ ಚಿತ್ರಗಳು ಇರಲಿಲ್ಲ. ಅಂದರೆ ನನ್ನ ಕಣ್ಣಿಗೆ ಕಾಣಿಸಲಿಲ್ಲ. ಆ ಕಾಲದಲ್ಲಿ ನನ್ನಂತಹವರು ಇಂಗ್ಲೀಷ್ ಪತ್ರಿಕೆಗಳು, ಮತ್ತು ಪುಸ್ತಕಗಳನ್ನೇ ಓದುತ್ತಿದ್ದುದು. ಆಂಗ್ಲೇಯರ ಆಡಳಿತದಲ್ಲಿ ಗುಲಾಮರಾಗಿದ್ದೆವಲ್ಲ! ಇಂಗ್ಲೀಷಿಗೆ ದುಂಬಾಲು ಬೀಳಲು ಅದೂ ಒಂದು ಕಾರಣವಾಗಿದ್ದಿರಬಹುದು. ಅಲ್ಲದೆ ಕನ್ನಡದಲ್ಲಿ ಅಂತಹ ಚೂಟಿ ಪತ್ರಿಕೆಗಳೇ ಇಲ್ಲದಿದ್ದದೂ ಹಿರಿಯ ಕಾರಣವಾಗಿದ್ದಿರಬೇಕು.

ನಮ್ಮ ಜನತೆಗೆ ಸ್ವಾತಂತ್ರ್ಯ ದೊರಕಿತು. ಪತ್ರಿಕೆಗಳಲ್ಲಿ ಜನತೆಯ ಹಿತ ಸಾಧನೆಗಾಗಿ ಯೋಜನೆಗಳು ಅಭಿಪ್ರಾಯಗಳೂ ಪ್ರಕಟಿಸಲಾರಂಭವಾದುವು. ಹಾಗೂ ಸುದ್ದಿಗಳನ್ನು ವ್ಯಂಗ್ಯ ಚಿತ್ರಗಳ ಮೂಲಕ ತಿಳಿಸುವುದೂ

ಪೆಚ್ಚಾಗತೊಡಗಿದುವು. ಇಂಗ್ಲೀಷಿನಲ್ಲಿ ಹಾಸ್ಯಕ್ಕೆ ಮೀಸಲಾದ ಶಂಕರ್ಸ್‌ವೀಕ್ಲಿ ಆರಂಭವಾಯಿತು. ಶಂಕರ್ ಅವರು ಪ್ರತಿಭಾವಂತ ವ್ಯಂಗ್ಯ ಚಿತ್ರಕಾರ. ಕಾರಣ ಪತ್ರಿಕೆಯಲ್ಲಿ ಅರ್ಥಪೂರ್ಣ ವ್ಯಂಗ್ಯಚಿತ್ರಗಳು ಕಾಣಲಾರಂಭಿಸಿದುವು. ಆ ಪತ್ರಿಕೆಯಲ್ಲಿ 'ಕುಟ್ಟಿ' ನಾಮಾಂಕಿತದ ವ್ಯಂಗ್ಯ ಚಿತ್ರಗಳು ಬರತೊಡಗಿದುವು. ಅತಿ ಸೂಕ್ಷ್ಮವಾಗಿಯೂ ಆದರೆ ಹರಿತವಾಗಿಯೂ ಸುದ್ದಿಯನ್ನು ವಿಡಂಬನೆ ಮಾಡಿ ಹೊರಗೆಡುತ್ತಿತ್ತು.

ಕನ್ನಡದಲ್ಲಿ ೧೯೪೨ರಲ್ಲಿ ಅದೇ ಸುಮಾರಿಗೆ ಅದೇ ಉದ್ದೇಶವನ್ನು ಹೊಂದಿದ್ದ ಕೊರವಂಜಿಯು ಆರಂಭವಾಯಿತು. ಶ್ರೀ ಆರ್.ಕೆ. ಲಕ್ಷ್ಮಣ್ ಅವರು ವ್ಯಂಗ್ಯ ಚಿತ್ರಗಳನ್ನು ಬರೆದರು. ಮೊದಲ ಚಿತ್ರ ನಾ. ಕಸ್ತೂರಿಯವರ ಹುರಿಗಾಳಿಗೆ ರಚಿಸಿದ ರೇಖಾಚಿತ್ರ. ಟೌನ್ ಹಾಲಿನಲ್ಲಿ ಭಾಷಣವನ್ನು ಕೇಳುತ್ತಿದ್ದವರು. ಆಕಳಿಸಿದಾಗ ಅವನ ಬಾಯಿ ಹಾಗೇ ತೆರೆದುಕೊಂಡಿತ್ತು ಎಂಬ ಸುದ್ದಿಯು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಆಕಳಿಸುವವನ ಬೋರ್ ತುಂಬಿದ ಮುಖ. ನಿದ್ದೆ ಸೂಚಿಸುವ ಝೋಂಪರು ಕಣ್ಣು, ಕುಳಿತಿರುವವ ಹಿಂದಕ್ಕೆ ವಾಲಿ ಮಲಗುವುದನ್ನು ತಡೆಯಲು ಎಡಗೈಯನ್ನು ಊರೆ ಕೊಟ್ಟು ಕುಳಿತಿರುವುದು ಬಲು ಅಂದವಾಗಿತ್ತು. ಕಾಲು ಶತಮಾನದ ನಂತರ ನಿಮ್ಮ ನಾಡು ಸಾಕು, ಕಾಡಿನಲ್ಲೇ ಹೆಚ್ಚು ಸ್ವಾತಂತ್ರ್ಯ ಎಂದು ಮಂಗಳ ಹಾಡಿ ಕೊರವಂಜಿಯು ಹೊರಟಾಗ, ಅದೇ ವ್ಯಂಗ್ಯಚಿತ್ರವನ್ನು ಬಳಸಿ ಮಹಿಶೂರ ಕನ್ನಡಿಗನನ್ನು ನಾಮಕರಣ ಮಾಡಿ 'ಹೋಗಿಬಿಟ್ಟು ಬರ್ತೀನಿ' ಅಂದೆಯಾ ಕೊರವಂಜಿ! ಇಷ್ಟು ದಿನವೂ ನೀನು ಇದ್ದಿದ್ದೇ ಗೊತ್ತಾಗಲಿಲ್ಲವಲ್ಲೇ ಎಂದು ವಿವರಿಸಲಾಗಿತ್ತು.

ಲಕ್ಷ್ಮಣ್ ಈಗ ಅಂತರ್ರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ ಪ್ರಚಂಡ. ಆಗ ಇನ್ನೂ ಕಾಲೇಜ್ ವಿದ್ಯಾರ್ಥಿಯಾಗಿದ್ದ. ಪ್ರತಿ ತಿಂಗಳೂ ವ್ಯಂಗ್ಯ ಚಿತ್ರಗಳನ್ನು ಬರೆದು ಕಳಿಸುತ್ತಿದ್ದ. ದಿಟ್ಟ ಗೆರೆಗಳು, ಮೂರು ನಾಲ್ಕು ಗೆರೆಗಳು, ಮೂರು ನಾಲ್ಕು ಗೆರೆಗಳಲ್ಲಿ, ಹಾವ ಭಾವ ವಿಲಾಸವನ್ನೂ, ಓಟ ವಾಲಾಟಗಳನ್ನೂ, ಬಲು ಚೆಲುವಾಗಿ ಮೂಡಿಸುತ್ತಿದ್ದ. 'ಇದೇನೋ ಫ್ರೆಂಟ್ ಬ್ರೇಕು?' ಎಂಬ ಶಿರೋನಾಮೆಯಿದ್ದ ಚಿತ್ರದಲ್ಲಿ ಹೊಸದಾಗಿ ಬೈಸಿಕಲ್ ತುಳಿಯಲು ಕಲಿಯುತ್ತಿದ್ದನು, ಬ್ರೇಕ್‌ಅನ್ನು ಜಟ್ಟಂತ ಬಿಗಿ ಒತ್ತಿದಾಗ, ಬೈಸಿಕಲ್ಲು ತಟ್ಟಂತ ನಿಂತಾಗ, ಅವ ಹ್ಯಾಂಡಲ್ ಮೇಲೆ ಎತ್ತಿ ಹಾಕಲ್ಪಟ್ಟಾಗ, ದೇಹದ ವಕ್ರಗತಿ, ಮುಖದಲ್ಲಿ ಕಾತರ ಎಲ್ಲವೂ ಸಲ್ಲಕ್ಷಣವಾಗಿ ಕಾಣುತ್ತಿತ್ತು.

ಬ್ರಹ್ಮ ಹಣೆಯ ಮೇಲೆ ಭವಿಷ್ಯವನ್ನು ಬರೆದಿರುತ್ತಾನಂತೆ. ಲಲಾಟ ಲಿಖಿತಾ ರೇಖಾ ಎಂದು ಸಂಸ್ಕೃತದಲ್ಲಿ ಹೇಳುತ್ತಾರೆ. ಅಂದರೆ ಬ್ರಹ್ಮ ಬರೆಯುವುದು ರೇಖಾ

ಚಿತ್ರವನ್ನೇ ಇರಬೇಕು! ಅದಕ್ಕಾಗಿಯೇ ಏನೋ, ಮಾನವ ಪ್ರಾಣಿಯ ಪಾಡು ಇಂದಿನ ನಾಗರಿಕ ಜೀವನದಲ್ಲಿ ಹಾಸ್ಯಾಸ್ಪದವಾಗಿರುವುದು; ನಗೆ ಪಾಟಲಿಗೆ ಗುರಿಯಾಗಿರುವುದು!! ನಮ್ಮ ಹಣೆಯ ಬರಹವನ್ನು ನೋಡಿ, ವ್ಯಂಗ್ಯ ಚಿತ್ರವನ್ನು ನೋಡಿದಂತಾಗಿ ಕತ್ತೆ ಕಿರುಬನೂ ಗಹಗಹಿಸಿ ನಗುತ್ತಲೇ ಇರುತ್ತಾನಂತೆ. The Hyena langhs ಅಂತನ್ನುವುದರ ಮರ್ಮ ಈಗ ಅರ್ಥವಾಗಬಹುದು.

ಕಾಡ ಹುಡುಗಿ, ಕಣಿ ಹೇಳುವ ಹುಡುಗಿ, ಅದೂ ಕನ್ನಡದ ಹುಡುಗಿ, ಅಂದ ಮೇಲೆ ಕಟ್ಟು ಬಡವಿ ಎಂದು ಹೇಳಬೇಕೆ? ಲಕ್ಷ್ಮಣ್ ಬೆಳೆಯುತ್ತಿರುವ ಚೆಂದುಳ್ಳಿ ಹುಡುಗ. ಬೊಂಬಾಯಿಗೆ ಛಂಗಿ ಹೋದ. ಇಂಡಿಯಾ ತುಂಬಾ ಹರಡಿಕೊಂಡ. ಟೈಂಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ತನ್ನ ಪ್ರತಿಭೆಯನ್ನು ರಾಷ್ಟ್ರಕ್ಕೇ ವಿಸ್ತರಿಸಿದ. ಅಂದರೆ ಕೊರವಂಜಿಯು ಇನ್ನೂ ಬಡವಾದಳು. ರೇಖಾ ಚಿತ್ರಗಳನ್ನು, ಸಾಮಯಿಕವಾದ ಸಂಗತಿಗಳಿಗೆ ಅನ್ವಯಿಸಿ ವಿಡಂಬನ ಮಾಡಿ ಬರೆಸಬೇಕಾಯಿತು. ನಮ್ಮಲ್ಲಿ ವರ್ಣಚಿತ್ರವನ್ನು ಬಿಡಿಸುವ ಕಲಾಯುವಕರಿದ್ದರು. Commercial art, ಅಂದರೆ ವಸ್ತುಗಳ ಪ್ಯಾಕೇಜಿಂಗ್ ಮತ್ತು ಜಾಹೀರಾತುಗಳಿಗೆ ಅಣಿಯಾದ ಚಿತ್ರಗಳನ್ನು ಬರೆಯುವವರಿದ್ದರು. ಇವರಲ್ಲಿ ಕೆಲವು ಉತ್ಸಾಹೀ ಯುವಕರನ್ನು ಹಿಡಿದು ತಿಂಗಳಿಗೊಮ್ಮೆ ಭಾನುವಾರದಂದು, ಒಟ್ಟಿಗೆ ಕೂಡಿಸಿ, ತಿಂಡಿ ತೀರ್ಥಗಳನ್ನು ಸಾಕಷ್ಟು ಸಮೃದ್ಧಿಯಾಗಿ ಕೊಟ್ಟು, ''ನೋಡೀಪ್ಪಾ! ಈ ತಿಂಗಳಲ್ಲಿ ಇಂತಿಂತಹ ಘಟನೆಗಳು ಲೋಕದಲ್ಲಿ ರಾಷ್ಟ್ರದಲ್ಲಿ, ನಮ್ಮ ರಾಜ್ಯದಲ್ಲಿ ನಡೆದಿವೆ. ಇವುಗಳನ್ನು ವಿಡಂಬನೆ ಮಾಡಿ, ಈ ರೀತಿಯ ವ್ಯಂಗ್ಯ ರೇಖಾ ಚಿತ್ರಗಳನ್ನು ಬಿಡಿಸಿ, ಮುಖ್ಯವಾಗಿ ಗಮನದಲ್ಲಿಟ್ಟುಕೊಳ್ಳಿ:

೧. ರೇಖಾ ಚಿತ್ರಗಳಲ್ಲಿ ವ್ಯಂಗ್ಯ ಮತ್ತು ವಿಡಂಬನೆಯೇ ಮುಖ್ಯ ಉದ್ದೇಶ. ಸುಸಂಸ್ಕೃತರು ನಗುವಂತಾಗಬೇಕು.

೨. ಆದಷ್ಟು ಕಡಿಮೆ ರೇಖೆಗಳಿರಬೇಕು. ವರ್ಣಚಿತ್ರಗಳಂತೆ ಪ್ರತಿಯೊಂದು ಸೂಕ್ಷ್ಮವನ್ನೂ ಬಿಡಿಸಬಾರದು.

ಇಗೋ ನೋಡಿ, ಪಂಚ್ ಪತ್ರಿಕೆಯ ಈ ವ್ಯಂಗ್ಯ ಚಿತ್ರವನ್ನು! ಆಂಗ್ಲ ಸಮಾಜಕ್ಕೆ ಆ ಕಾಲಕ್ಕೆ ಇದು ಅತ್ಯುಚಿತವಾಗಿತ್ತು. ನಮ್ಮ ಸಮಾಜಕ್ಕೆ ಅನ್ವಯಿಸಿಕೊಂಡು ಈ ರೀತಿ ಚಿತ್ರಿಸಬಹುದು, ಎಂದು ಉದಾಹರಣೆಯನ್ನು ತೋರಿಸಿ, ಸಲಹೆಯನ್ನು ಕೊಡುತ್ತಿದ್ದೆ.

೩. ಜನ ಸಾಮಾನ್ಯರಲ್ಲಿ ಹಾಸು ಹೊಕ್ಕಾಗಿರುವ ಗಾದೆಗಳು, ಕವಿ ವಾಣಿಗಳು, ಸಾಹಿತ್ಯದ ನುಡಿ ಮುತ್ತುಗಳು ಇವುಗಳನ್ನು ಬಳಸಿಕೊಂಡರೆ, ರೇಖಾ ಚಿತ್ರವು

ಜನಪ್ರಿಯವಾಗುತ್ತದೆ. ಉದಾ: ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಪಲ್ಲ ಅಂತಿದೆ. ಯುವತಿಯೊಬ್ಬಳು ಗಂಡನೆದುರು ಕಣ್ಣೀರು ಹಾಕಿ, ಹಬ್ಬಕ್ಕೆ ಹೊಸ ಸೀರೆ ಗಿಟ್ಟಿಸಿಕೊಳ್ಳುತ್ತಾಳೆ. ''ಕಣ್ಣಹನಿ ಗೂಡಿದರೆ ಹೊಸ ಸೀರೆ'' ಅಂತ, ಕಣ್ಣೀರು ಹಾಕಿದ್ದ ಮತ್ತು ಹೊಸ ಸೀರೆ ಉಟ್ಟ, ಚಿತ್ರಗಳೆರಡರ ಜೋಡಿಯನ್ನು ಬರೆಯಬಹುದು. ಲಕ್ಷ್ಮಣ್ ಚಿತ್ರವನ್ನು ನೋಡಿ. ಸರ್ವಜ್ಞನ ತ್ರಿಪದಿಯನ್ನು ಬಾಲಕರಿಗೆ ಶಾಲಾ ಮಾಸ್ತರು ಕಲಿಸುತ್ತಿದ್ದಾರೆ. ಹುಡುಗನೊಬ್ಬ ''ಹಾಗಾದರೆ ಪಾಲೋಗರವನ್ನು ಉಂಡಾಗ ಸಾಲವನ್ನು ಕೊಂಬಂತೆ'' ಇರುತ್ತ್ಯೇನ್ಸಾರ್? ಎಂದು ಕೇಳುತ್ತಾನೆ.

೪. ನಿಮ್ಮ ಸುತ್ತು ಮುತ್ತಲೂ ಏನಾಗುತ್ತಿದೆ ಎನ್ನುವುದನ್ನು ಗಮನಿಸಿ. ಆಗ ವಿಡಂಬನಾ ವಸ್ತುಗಳು ಕಂಡೇ ಕಾಣುತ್ತವೆ. ಹೋಟಲಿಗೆ ಕಾಫಿ ಕುಡಿಯಲು ಹೋದಾಗ, ರಸ್ತೆಯಲ್ಲಿ ನಡೆಯುವ ವಿಪರೀತಗಳು ಗಮನಕ್ಕೆ ಬರಬಹುದು. ಉದಾ: ಮೊನ್ನೆ ರಾಜಾಮಹಲ್ ಗುಟ್ಟಳ್ಳಿಯ ಮಾರ್ಗ ಬಸ್ಸಿನಲ್ಲಿ ಹೋಗುತ್ತಿದ್ದೆ, ಪ್ಯಾಲೆಸ್ ಆರ್ಚ್‌ಡ್ಸ್‌ಗೆ ರಾಜಾ ಪ್ಯಾಲೆಸ್, ಈ ಹೆಸರಿದ್ದರೂ ಸುತ್ತಲೂ ಗುಡಿಸಿಲುಗಳೇ, ಆದರೆ ಗಾಂಧೀನಗರದಲ್ಲಿ ಅರಮನೆಗಳೇ ಇವೆ. ಹೀಗೆ ಗಮನಿಸಬೇಕಾದರೆ. ಮನಸ್ಸಿನ ಗ್ರಹಣ ಶಕ್ತಿಯನ್ನು ಅಣಿ ಮಾಡಿಕೊಳ್ಳಬೇಕು. ಜೋಡಿ ಚಿತ್ರಗಳಾಗಿ ಅವು ಪ್ರಕಟವಾದುವು. ಭಂಗಿ ಕಾಲನಿ, ವಾರ್ತಾ ಆಶ್ರಮದ ಗಾಂಧೀ ಹೆಸರಿನ ಬಡಾವಣೆ ಶ್ರೀಮಂತರದು. ರಾಜಾ ಪ್ಯಾಲೆಸ್ ಸುತ್ತ ಭಿಕಾರಿಗಳ ಗುಡಿಸಲುಗಳು!

೫. ಈಗ ನಡೆದ ಘಟನೆಗಳಿಗೆ ಪುರಾಣದ ಕತೆಗಳ ರಂಗುಕೊಟ್ಟು ಚಿತ್ರಿಸಬಹುದು. ಉದಾ: ಇಂಡಿಯಾ ಮತ್ತು ಪಾಕೀಸ್ಥಾನಗಳು ಅಸ್ತಿತ್ವಕ್ಕೆ ಬಂದಾಗ, ಗಾಂಧೀಜಿಯವರಿಗೆ ತುಂಬಾ ದುಃಖವಾಯಿತು. ಖಿರಾಫತ್ ಕಾಲದಿಂದ ಹಿಂದೂ ಮುಸಲ್ಮಾನ್ ಮೈತ್ರಿಗೆ ಶ್ರಮಿಸಿದ್ದರು. ಸೋದರ ಭಾವನೆ ಹೋಯಿತಲ್ಲಾ; ದಾಯಾದಿ ಮಾತ್ಸರ್ಯಕ್ಕೆ ದಾರಿಯಾಯ್ತಲ್ಲಾ ಅಂತ ದುಃಖ.

ರವಿವರ್ಮನ ಚಿತ್ರ ಇದೆಯಲ್ಲಾ! ಮೇನಕೆಯು ಶಿಶು ಶಾಕುಂತಳೆಯನ್ನು ತಂದು ತಾತ್ಕಾಲಿಕ ಪತಿ ವಿಶ್ವಾಮಿತ್ರನಿಗೆ ತೋರಿಸಿದಾಗ, ಅವ ನನಗೆ ಬೇಡ ಎಂದು ಒಂದು ಕೈಯೆತ್ತಿ, ಇನ್ನೊಂದು ಕೈ ಬೀಸಿಕೊಂಡು ನಡೆದೇ ಬಿಡುತ್ತಾನಲ್ಲ! ರೇಖಾ ಚಿತ್ರದಲ್ಲಿ ಮೇನಕೆಯ ಕೈಲಿ ಅವಳಿ ಮಕ್ಕಳನ್ನಿರಿಸಿ, ಗಾಂಧೀಜಿಯನ್ನು ವಿಶ್ವಾಮಿತ್ರನಂತೆ ಚಿತ್ರಿಸಲಾಯಿತು. ಈ ಚಿತ್ರಕ್ಕೆ ವಿವರಣಾ

ನುಡಿಗಳ ಅಗತ್ಯವೇ ಇಲ್ಲ. ಇಂತಹ ಮಾತಿಲ್ಲದ ಹಾಗೂ ಬಲು ಅರ್ಥಪೂರ್ಣವಾದ ರೇಖಾ ವ್ಯಂಗ್ಯ ಚಿತ್ರಗಳೇ ಅತ್ಯುತ್ತಮ.

೬. ನಮ್ಮ ರಾಷ್ಟ್ರಕ್ಕೆ ಈಗ ಸ್ವಾತಂತ್ರ್ಯ ಬಂದಿದೆ. ನಮಗೆ ನಾವೇ ರಾಜ; ನಮಗೆ ನಾವೇ ಮಂತ್ರಿ. ಆದರೆ ನಮಗೆ ನಾವೇ ಕಾವಲು ಕಾಯುತ ಕೋಲುಗಾರರಾಗಲಿಲ್ಲ. ಇಂತಹ ಹಂತದಲ್ಲಿ, ಇಂಗು ತಿಂದ ಮಂಗಗಳಂತೆ ಪಿಲ್ಲೊ ನಾಯಕರು ಎಗರಾಡುತ್ತಾರೆ. ವಿಫುಲವಾದ ವ್ಯಂಗ್ಯ ಚಿತ್ರ ವಸ್ತುಗಳು ದೊರಕುತ್ತವೆ. ದೈನಂದಿನ ಪತ್ರಿಕೆಯನ್ನು ಗಮನಿಸುತ್ತಿರಿ ಎಂದಿದ್ದೆ.

ಉದಾ: ಹತ್ತೂ ಜನರಿಗೆ ಹಾರಗಳಿಗಾಗಿ ಹಿಂಗೈ ಹಣವನ್ನು ಮರೆಯಾಗಿ ಕೊಟ್ಟು, ಸಾರ್ವಜನಿಕ ಸಮಾರಂಭ ಒಂದರಲ್ಲಿ ಅಧ್ಯಕ್ಷರಾದಾಗ, ಅವರ ಕೊರಳಿಗೆ ಹಾರಗಳ ಮೇಲೆ ಹಾರಗಳು ಬೀಳುತ್ತಿದ್ದುವು. ಆ ಫೋಟೋಗಳು ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದುವು. ಇದನ್ನು ನೋಡುತ್ತಿದ್ದ ಕಾಲೇಜ್ ಯುವಕರು, ಮೃಗಾಲಯದಲ್ಲಿ ಜಿರಾಫೆಗಳನ್ನು ನೋಡಿದಾಗ ''ನಮ್ಮ ಪಿಲ್ಲೊ ಮಂತ್ರಿಗೆ ಇಂತಹ ಉದ್ದಾನೆ ಕತ್ತಿದ್ದಿದ್ದರೆ ಎಷ್ಟು ಅನುಕೂಲವಾಗಿರುತ್ತಿತ್ತು'' ಎಂದಂದರು. ಜಿರಾಫೆಯು ವ್ಯಂಗ್ಯ ಚಿತ್ರಕ್ಕೆ ಒದಗಿ ಬಂತು. ಓದುಗರ ಮೇಲೆ ಪ್ರಭಾವವನ್ನು ಬೀರಿತು. ಏಕೆಂದರೆ ಅಷ್ಟೊಂದು ಹಾರಗಳ ಹಿನ್ನೆಲೆಯೂ ತಿಳಿದಿತ್ತು, ಸಾರ್ವಜನಿಕ ಸುದ್ದಿಯಾಗಿತ್ತು.

೭. ಸಂಸಾರ ಜೀವನದಲ್ಲೂ, ಸಮಾಜದ ಶೀಘ್ರ ಪರಿವರ್ತನೆಯಿಂದಾಗಿ, ಏರುಪೇರುಗಳಾಗುತ್ತವೆ. ವ್ಯಂಗ್ಯ ಚಿತ್ರಗಳಿಗೆ ಸಾಮಗ್ರಿಯು ಹೇರಳವಾಗಿ ದೊರೆಯುತ್ತವೆ. ಕಣ್ಣಿನಲ್ಲಿ ಕಣ್ಣಿಟ್ಟು ನೋಡಬೇಕಾಗಿಲ್ಲ. ವಕ್ರದೃಷ್ಟಿಯಿಂದ ಒಮ್ಮೆ ನೋಡಿದರೆ ಸಾಕು.

ಉದಾ: ಮನೆಗೆಲಸಕ್ಕೆ ಬರುವ ಗೃಹ ಕಾರ್ಮಿಕಳು ಈಗ ಎಂಟನೆ ತರಗತಿಯ ತನಕ ಓದಿರುತ್ತಾಳೆ. ಹಿಂದಿನಂತೆ ನಿರಕ್ಷರ ಕುಕ್ಷಿಯಲ್ಲ. ಮನೆಯಾಕೆ ಮುದುಕಿಯು ಹಳೆ ಕಾಲದವಳು. ಅವಳೇನೂ ಕಲಿತವಳಲ್ಲ. ಆದರೆ ಕೈತುಂಬಾ ಸಂಪಾದಿಸುವನ ಕೈ ಹಿಡಿದು ಶ್ರೀಮಂತಿಕೆಯಿಂದ ದರ್ಪ ತೋರಿಸುತ್ತಿರುತ್ತಾಳೆ. ಮಾಸಿದ ಸೀರೆಯನ್ನು, ಬಲು ಧಾರಾಳಿಯಂತೆ ಕಸ ಮುಸುರೆಯ ಗೃಹ ಕಾರ್ಮಿಕಳಿಗೆ ಧರ್ಮಕ್ಕೆ ಕೊಡಹೋಗುತ್ತಾ ಇದನ್ನುಟ್ಟುಕೊಂಡರೆ ಯಜಮಾನ್ರು ಚೆನ್ನಿಲ್ಲ ಅಂತಾರೆ, ನೀನುಟ್ಟುಕೋ ತಗೋ ಎನ್ನುತ್ತಾರೆ. ''ಬೇಡವ್ವಾ, ನಾನುಟ್ಟುಕೊಂಡರೂ ಅವರು ಹಾಗೇ ಅಂತಾರೆ'' ಎಂದು ಗೃಹ ಕಾರ್ಮಿಕಳು

ಹೇಳುತ್ತಾಳೆ. ಈ ವ್ಯಂಗ್ಯ ಚಿತ್ರವನ್ನು ನೋಡಿದವರಿಗೆ, ಗೃಹ ಕಾರ್ಮಿಕಳ ಯೌವ್ವನ, ಮನೆಯಾಕೆಯ ಮುಪ್ಪು ಮತ್ತು ಧಡೂತಿ, ಮತ್ತು ಯಜಮಾನನ ಮರೆಯಲ್ಲಿನ ಮೆರೆದಾಟ, ಎಲ್ಲವೂ ಸ್ಪಷ್ಟವಾಗಿ ನಗು ಮೂಡುತ್ತದೆ. ಈ ಚಿತ್ರದಲ್ಲಿ ಕಾರ್ಮಿಕಳ ಯೌವ್ವನ, ಮನೆಯಾಕೆಯ ಧಡೂತಿ ಈ ಗೆರೆಗಳು ಸರಳವಾಗಿದ್ದರೂ, ಪರಿಣಾಮಕಾರಿಯಾಗಿರಬೇಕು. ಇಬ್ಬರ ಮುಖದಲ್ಲೂ ಮನಸ್ಸಿನಲ್ಲಿ ಆಗಿನ ಭಾವಗಳನ್ನು ಎತ್ತಿ ತೋರಿಸಬೇಕು. ಮುಖಗಳ ಮಾದರಿಗೆಂದು ಪಂಚ್ ಮತ್ತು ನ್ಯೂಯಾರ್ಕ ಪತ್ರಿಕೆಗಳ ವ್ಯಂಗ್ಯ ಚಿತ್ರಗಳನ್ನು ಶೇಖರಿಸಿಟ್ಟ ಆಲ್ಬಂನಿಂದ ತೆಗೆದು ತೋರಿಸಲಾಯಿತು.

★★★

ಹೀಗೆಲ್ಲಾ ವ್ಯಾಖ್ಯಾನ ಮಾಡಿ, ವ್ಯಂಗ್ಯಕ್ಕೆ ಅಣಿಯಾಗಿರುವ ಸುದ್ದಿಗಳನ್ನೂ, ಇತರ ರಾಜಕೀಯ, ಸಾಮಾಜಿಕ, ಸಂಸಾರದ ಮತ್ತು ಸಂಗತಿಗಳನ್ನೂ ಮುಂದಿಟ್ಟು. ನಿಮ್ಮ ಚಾಲೂಕನ್ನು ಉಪಯೋಗಿಸಿ ವ್ಯಂಗ್ಯ ಚಿತ್ರಗಳನ್ನು ಬರೆದು ತನ್ನಿ ಎಂದನ್ನುತ್ತಿದ್ದೆ ಚಿರಂಜೀವಿಗಳೇನೋ ಶ್ರದ್ಧೆಯಿಂದ ಚಿತ್ರಿಸಿ ತಂದುಕೊಡುತ್ತಿದ್ದರು. ಬಲು ಕಷ್ಟಪಡುತ್ತಿದ್ದರು. ಅವುಗಳನ್ನು ನೋಡುವಾಗ ನನಗೂ ಕಷ್ಟವಾಗುತ್ತಿತ್ತು. ನಾನು ವಿವರಿಸಿದ 'ಜೋಕ್' ಅಂಶವು ಅವರುಗಳಿಗೆ ಅರ್ಥವೇ ಆಗಿರಲಿಲ್ಲವೋ? ಹೇಳಿದ್ದನ್ನು ಮುಕ್ಕಾಮಕ್ಕಿಯಾಗಿ ಕತೆಗಳಿಗೆ ಅಳವಡಿಸುವ ಚಿತ್ರಗಳಂತೆ ಬಿಡಿಸಿದ್ದಾರಲ್ಲ ಎಂದು ಹಲವಾರು ಬಾರಿ ಅನಿಸುತ್ತಿತ್ತು. ತಿರುಗಿ ಆ ಚಿತ್ರಗಳಿಗೆ ತೇಪೆ ಹಾಕಿ, ಕೆಟ್ಟದ್ದರಲ್ಲಿ ಮಧ್ಯಸ್ಥ ಮಾಡುವ ಹೊತ್ತಿಗೆ, ನನಗೆ ಅಳುವೇ ಬರುತ್ತಿತ್ತು. ಕಾಲಾತೀತವಾದ ವರ್ಣಚಿತ್ರಗಳನ್ನು ಬಿಡಿಸುವವರು, ತಾತ್ಕಾಲಿಕವಾದ ವ್ಯಂಗ್ಯಚಿತ್ರಗಳ ಮನೋಧರ್ಮವನ್ನು ಹೊಂದಲಸಾಧ್ಯ ಎಂದು ತಿಳಿಯಿತು. ಹೀಗೆ ಒದ್ದಾಡುತ್ತಿದ್ದಾಗ, ಪ್ರಜಾವಾಣಿ ಮತ್ತು ಡೆಕ್ಕನ್ ಹೆರಾಲ್ಡ್‌ನಲ್ಲಿ ಚಿ|| ಮೂರ್ತಿಯ ವ್ಯಂಗ್ಯ ಚಿತ್ರಗಳು ಬರಲಾರಂಭಿಸಿದುವು. 'ಓ! ಲಕ್ಷ್ಮಣಾ, ಬೊಂಬಾಯಿಗೆ ಹೋದೆಯಾ' ಅನ್ನುತ್ತಿದ್ದಾಗ 'ಖಿನ್ನನಾಗಬೇಡ, ಕನ್ನಡಿಗ, ನಾನು ರಾಮಮೂರ್ತಿ ಬಂದಿದ್ದೇನೆ' ಎಂದಂತಾಯಿತು. ಸುಸ್ಪಷ್ಟ ದೃಢ ಗೆರೆಗಳು ಮೂರು ನಾಲ್ಕು ಗೆರೆಗಳಲ್ಲೇ ಮುಖದ ಚಹರೆಯನ್ನು ಲಕ್ಷಣವಾಗಿ ತೋರಿಸುವ ಚೂಟಿ; ಸುತ್ತಲೂ ನಡೆಯುತ್ತಿರುವ ರಾಜಕೀಯ, ಸಾಮಾಜಿಕ, ಆಡಳಿತದ ವಿಷಯಗಳ ಪ್ರಜ್ಞೆ; ಮುಖ್ಯ ಆಜನ್ಮ ಪ್ರತಿಭಾವಂತ ಮೂರ್ತಿ.

ಆಸ್ಟ್ರೇಲಿಯಾದ ವಿರುದ್ಧ ಪ್ರಪ್ರಥಮ ಬಾರಿಗೆ ಭಾರತವು ಟೆಸ್ಟ್ ಕ್ರಿಕೆಟ್ಟಿನಲ್ಲಿ ವಿಜಯ ಸಾಧಿಸಿತ್ತು. ನಮ್ಮೂರ ರಾಜಕೀಯದಲ್ಲಿ, ಅರಸರು, ಪಾಟೀಲರು ಒಂದೇ ಪಂಗಡದ ಇಬ್ಬರು ಬ್ಯಾಟ್ ಮಾಡುತ್ತಿದ್ದಾರೆ. ಬೌಲರೇ ಇಲ್ಲ! ಆದರೆ ರಾಷ್ಟ್ರಾಧ್ಯಕ್ಷರ ಆಡಳಿತ ಎನ್ನುವ ಚೆಂಡು ಮೇಲಿಂದ ಮಿಂಚಿಬಂದು ಅರಸರ ವಿಕೆಟ್ಟುಗಳನ್ನು ಚೆಲ್ಲಾಪಿಲ್ಲಿಯಾಗಿಸಿದೆ. ಅದೇ ಪಂಗಡದ ಜತೆಯಾಟಗಾರ ಪಾಟೀಲರು ಬಲು ಖುಷಿಯಿಂದ ನಗುತ್ತಿದ್ದಾರೆ. ಅರಸರು ಪಾಟೀಲರನ್ನು ಯಾರೂ ಸುಲಭವಾಗಿ ಗುರುತಿಸಬಹುದು. ಕಾಂಗ್ರೆಸ್ ಒಳಜಗಳ ತಮ್ಮ ಗೋಲಿಗೆ ತಾವೇ ಗೋಲು ಹೊಡೆದು ತಮ್ಮ ಪಕ್ಷವು ಸೋಲುವುದನ್ನು ಕಂಡು ಹಿಗ್ಗುವ ನಮ್ಮ ನಾಯಕರ ಜಾಯಮಾನ. ರಾಜ್ಯದ ಈ ಪೆದ್ದಾಟವು ದಿಳ್ಳಿಯಲ್ಲೂ ರಾಷ್ಟ್ರಮಟ್ಟದಲ್ಲಿ ನಡೆದಿರುವುದು ನಮ್ಮ ಸ್ಮರಣೆಗೆ ಬಂದೇ ಬರುತ್ತದೆ. ಸಮಕಾಲೀನ ಸಂಘಟನೆಗಳನ್ನು ಕೇವಲ ಒಂದು ತಿಳಿರೇಖಾ ಚಿತ್ರದಲ್ಲಿ ಅತ್ಯದ್ಭುತವಾಗಿ ಗೆರೆ ಹಾಕುವುದು, ಆ ಜನ್ಮ ಪ್ರತಿಭೆಯು, ಅನುಭವ ಮತ್ತು ಕಲಿಕೆಯಿಂದ ಪಕ್ವವಾಗಿರುವುದರಿಂದ ಸಾಧ್ಯವಾಗಿದೆ.

ಈ ವ್ಯಂಗ್ಯ ಚಿತ್ರಗಾರ, ಹವ್ಯಾಸಕ್ಕೆಂದು ವರ್ಣ ಚಿತ್ರಗಳನ್ನು ಬಿಡಿಸುತ್ತಿದ್ದಾನೆ. ವರ್ಣಚಿತ್ರಕಾರರು ಮೆಚ್ಚುವಂತೆ ಬಿಡಿಸುತ್ತಿದ್ದಾನೆ. ವರ್ಣಚಿತ್ರಗಾರರು ವ್ಯಂಗ್ಯಚಿತ್ರಕಾರರಾಗಲು ಸಾಧ್ಯವಿಲ್ಲ. ಜೂಜಿನ ಕುದುರೆಯನ್ನು ಜಟಕಾಕ್ಕೆ ಕಟ್ಟಿ ಓಡಿಸಿದಂತಾಗುತ್ತದೆ ಎಂದು ತೀರ್ಮಾನಿಸಿದ್ದರೆ. ನನ್ನ ಅಂದಿನ ತೀರ್ಮಾನವು ತಪ್ಪು ಎಂದು ಈಗ ತಿಳಿಯಿತು. ಪ್ರತಿಭೆಯೊಂದಿದ್ದರೆ ಇದರಲ್ಲಿ ಸಲ್ಲುವರು ಅದರಲ್ಲೂ ಸಲ್ಲುವರು ಎಂಬುದನ್ನು ಒಪ್ಪುತ್ತೇನೆ.

ಕೊರವಂಜಿಯ ವರ್ಷಗಳಲ್ಲಿ ಪತ್ರಿಕೆಗಳು ಆರ್ಥಿಕವಾಗಿ ಹೀನಸ್ಥಿತಿಯಲ್ಲಿದ್ದುವು. ದುಡ್ಡು ಹಾಕಿದ ಯಜಮಾನರೇ ದುಡಿದು ನಡೆಸುವ ಪತ್ರಿಕೆಗಳು. ನಮ್ಮ ಕಣ್ಣೆದುರಿಗೇ ಹಲವಾರು ಕಣ್ಣು ಮುಚ್ಚಿಕೊಂಡವು. ಇತ್ತೀಚೆಗೆ ಎಷ್ಟು ಕಷ್ಟವಾದರೂ ನಮಗೇನೂ ಕಷ್ಟವಿಲ್ಲ ಎಂದು ಹೇಳುವ ಖ್ಯಾತಿ ಇರುವ ಶ್ರೀಮಂತರು ಅಥವಾ ಅವರ ಕೂಟಗಳು ಪತ್ರಿಕೆಗಳನ್ನು ನಡೆಸುತ್ತಿವೆ. ಆಗಿನ ಕಾಲದಲ್ಲಿ ಹೊಟ್ಟೆಗಿಲ್ಲದ ಸಂಪಾದಕ ಯಜಮಾನ, ತನ್ನ ಪತ್ರಿಕಾ ಕಾರ್ಯ ಕರ್ತರಿಗೆ ಅಗತ್ಯವಾದ ಹಣವನ್ನು ಕೊಡಲಾಗುತ್ತಿರಲಿಲ್ಲ. ಅಂದಮೇಲೆ ವ್ಯಂಗ್ಯ ಚಿತ್ರಕಾರನಿಗೆ ತನ್ನ ಕಸುಬಿನಿಂದಲೇ ಸಂಪಾದಿಸಿ ಬಾಳಲಾಗುತ್ತಿರಲಿಲ್ಲ. ಕೇವಲ ಷೋಕಿಗೆ ತುಸು ಕೀರ್ತಿಗೆ ಶ್ರಮಿಸಬೇಕಾಗಿತ್ತು. ಈಗ ಪರಿಸ್ಥಿತಿ ಬದಲಾಯಿಸಿದರೆ ಉತ್ತಮಗೊಂಡಿದೆ. ಇಂದು ಪ್ರತಿಭಾವಂತ

ವ್ಯಂಗ್ಯ ಚಿತ್ರಕಾರನು ತನ್ನ ಕಸುಬಿನಿಂದಲೇ ಸಾಕಷ್ಟು ಅನುಕೂಲವಾದ ಬಾಳನ್ನು ನಡೆಸಲು ಸುಲಭಸಾಧ್ಯ.

ರಾಷ್ಟದಲ್ಲಿ ಹಾಗೂ ರಾಜ್ಯದಲ್ಲಿ ರಾಜಕೀಯ ಬದಲಾವಣೆಗಳು ಅತಿ ಶೀಘ್ರಗತಿಯಲ್ಲಿ ನಡೆಯುತ್ತಿವೆ. ಅವಸರದಲ್ಲಿ ಅಜ್ಜಿ ಮೈನೆರೆದು ಹೊಸಾ ಸಂಸಾರ ಹೂಡುತ್ತಾಳೆ. ಸಾಮಾಜಿಕವಾಗಿ ಹಳೆಯ ಮೌಲ್ಯಗಳೆಲ್ಲಾ ತಿಪ್ಪರಲಾಗ ಹಾಕುತ್ತಿವೆ. ಪ್ರೊಫೆಸರುಗಳು ವಿದ್ಯಾರ್ಥಿಗಳಿಗೆ ಹೆದರಿ ಬೆದರುತ್ತಾರೆ. ಓದಿದ ಸೊಸೆಯನ್ನು ಕಂಡು ಶ್ರೀಮಂತ ಅತ್ತೆಯಂದಿರು ಕೂಡ ನಡುಗುತ್ತಾರೆ. ಹಚ್ಚಿದ ಸಿಗರೇಟ್ ಕೂಡ sabotage ನಿಂದಾಗಿ ಆಸ್ಫೋಟಿಸುತ್ತದೆ. ಗಂಡು ಹೆಣ್ಣುಗಳ ಉಡಿಗೆ ತೊಡಿಗೆಗಳು ಸಮಸಮ ಫ್ಯಾಶನ್ ಆಗಿರುವುದರಿಂದ, ತಲೆಗೂದಲ ಶೃಂಗಾರದಲ್ಲೂ ಒಂದೇ ಆಗಿರುವುದರಿಂದ, ಯುವಕರು ತಮ್ಮ ಅಸ್ತಿತ್ವವನ್ನು ಪ್ರದರ್ಶಿಸಲು ಗಡ್ಡಮೀಸೆಗಳನ್ನು ಹೊರವಾಗಿ ಬೆಳೆಸುತ್ತಿದ್ದಾರೆ. ಹೆಂಗಸರು ಈ ಸ್ಪರ್ಧೆಯಲ್ಲಿ ಸೋಲಲೇಬೇಕು. ಕೆಲವು ಯುವತಿಯರೇನೋ ಕಿರು ಮೀಸೆಗಳನ್ನು ಬೆಳೆಸಲು ಯತ್ನಿಸಿದಂತೆ ಕಾಣಿಸಿದರೂ, ವಿಜಯವು ಖಂಡಿತಾ ಸಾಧ್ಯವಿಲ್ಲ. ಮೃಗಾಲಯದಲ್ಲಿ ಹೆಣ್ಣು ಗೋರಿಲ್ಲಾ ವಿಧವೆಯಾದರೆ, ಜನರೆಲ್ಲಾ ಸೂತಕ ಆಚರಿಸುತ್ತಾರೆ. ಸಾರಾಯಿ ತುಂಬಿದ ಲಾರಿ, ಅಲ್ಲ, ತುಂಬಿದ ಲಾರಿಯನ್ನು ಸಾರಾಯಿ ತುಂಬಿದ ಸಾರಥಿ ನಡೆಸಿ ಎಂಬತ್ತು ಜನರನ್ನು ಅಪ್ಪಚ್ಚಿ ಮಾಡಿದಾಗ ನಿತ್ಯ ಸಾಯೋರಿಗೆ ಅಳೋರು ಯಾರು ಅನ್ನುತ್ತೆ ಮಂದಿ. ಇಂತಹ ವೈಪರೀತ್ಯಗಳು ಇನ್ನು ಮುಂದೆ ಹೇರಳವಾಗುತ್ತವೆ. ವ್ಯಂಗ್ಯ ಚಿತ್ರಕಾರನಿಗೆ ಹಬ್ಬವು ಕಾದಿದೆ. ಪ್ರತಿಭೆ ಇದ್ದವರು ಸುಖ ಜೀವನವನ್ನು ನಡೆಸಲು ಸಾಕಷ್ಟು ಸಂಪಾದನೆಯನ್ನೂ ಪಡೆದು ಕನ್ನಡ ಜಡ ಜನತೆಯನ್ನೂ ಎಚ್ಚರಿಸಬಹುದು. ಹಾಗಾಗಲಿ ಎಂದು ಹಾರೈಸುತ್ತೇನೆ.

## ಥಳುಕು – ತುಣುಕು

**ನೇಚರ್ ಕ್ಯೂರ್**

**ಅರ್ಧಗಂಟೆ ಕೆಮ್ಮಣ್ಣನ್ನು ಹದವಾಗಿ ಮೆತ್ತಿಕೊಂಡರೆ**
**ಮುಖದ ಕಾಂತಿ ಇಮ್ಮಡಿಯಾಗುತ್ತೆ**

**ನಾವು ಕಂಡ ಮುಖಗಳು ಯಾಕೆ ಹಾಗಿವೆ**
**ಎಂದು ಈಗ ತಿಳಿಯಿತು.**

# ಇಂಟರ್ನೆಟ್ ಕಾರ್ಟೂನುಗಳು

ಇಂಟರ್ನೆಟ್‌ನಲ್ಲಿ ಕಂಡ ಹಲವು ವ್ಯಂಗ್ಯ ಚಿತ್ರಗಳನ್ನು ಇಲ್ಲಿ ನೋಡಬಹುದು. ನಗು ಮನೋಭಾವಕ್ಕೆ ರಾಷ್ಟ್ರ, ಜನಾಂಗಮುಂತಾದ ಕಟ್ಟುಪಾಡುಗಳಿಲ್ಲ ಅನ್ನೋದನ್ನ ಈ ಚಿತ್ರಗಳು ದೃಢೀಕರಿಸುತ್ತವೆ ಅನ್ನಿಸುತ್ತೆ ನನಗೆ. ನೀವೇ ನೋಡಿ, ನಿರ್ಧರಿಸಿ.






ನಾನೊಂದು ವಿಷಯ ಹೇಳ್ಲಾ. ನಾನು ಇನ್ನೊಬ್ಬ
ಹೆಂಗಸಿಗೂ ಕೂಡ ಇದೇ ತರಹ ತಲೆ ಬಿಟ್
ಹಿಡಿಸ್ತಾ ಇದ್ದೀನಿ




ನಿಜಕು ಬೇಡ, ಬೇಡವೆನಗೆ
ಸುಧೀರ್ಘ ವಿಶ್ವಸೃಷ್ಠಿಯ ಅವಧಿ
ಪ್ರಾಣಕಂತನು ದೂರ ಸರಿದಿರೆ
ತಿಳಿಯಬೇಕೆನಗೆ ನನ್ನ ಕೊರಗಿನ ಅವಧಿ!







' ಅಜ್ಜೀ, ಅಜ್ಜೀ, ತಾತ ಸತ್ಮೇಲೆ , ತಾತನ ಕನ್ನಡಕ ನನಗೇ ಸಿಗುತ್ತಾ ಅಜ್ಜೀ?'



' ಸಾರಿ ಮೇಡಂ, ಈ ಸಂಸ್ಥೇಲಿ ನಾನು ರೂಲ್ಸ್ ಮಾಡೋಲ್ಲ. ಬೇಕಾದ್ರೆ , ತಾನು ರೂಲ್ಸ್ ಮಾಡ್ತೀನಿ ಅಂತತಿಳ್ಕೊಂಡಿರೋರ್ಗೆ ಈ ಕಾಲ್ ನ ರವಾನಿಸ್ತೀನಿ

ಶಂಕರ್ಸ್ ಪುರವಣಿ




ರಿಕ್ರೂಟಿಂಗ್ ಆಫೀಸಿಗೆ ಹೋಗಬೇಕು
- ನಿಲ್ಲಿಸಿರಿ ಬಸ್ಸು; ಇನ್ನೊಂದು ಬಸ್ಸು ಬರುವ ಹೊತ್ತಿಗೆ
- ಯುದ್ಧ ಮುಗಿದು ಹೋಗಿರುತ್ತೆ.

# ರತ್ನಾಂತರಂಗ

– ಜಿ. ಶ್ರೀನಿವಾಸರಾಜು

ಗುಡಿಸಲ್ ಬಾಗಿಲ್ ಬೀಗದಂಗೇನೆ
ಮನಸಿನ್ ರಾಗಾನು
'ನಂಜಿ ಇಲ್ಲದ್ ಮನೆಗ್ ಯಾಕ್ಬರ್ತಿ?'
ಅಂತೈತ್ ಬೀಗಾನು

– ರತ್ನ ಬೇವಾರ್ಸಿ

★ ★ ★

ದುಕ್ಕಾನ್ ಒತ್ಕೊಂಡ್ ಬಂದೋರ್ ನಾವು!
ಒತ್ಕೊಂಡ್ ಓಗೋರ್‌ನಾವು!
ಸಿಕ್ದೋರತ್ರ ಯೇಳ್ಕೊಂಡಾಕ್ಸ್ನ
ಆರೋಗ್ತೈತ ಕಾವು!
ಸಾಯ್ತದೇನ್ ಈ ಆವು?
ಆರೋಕಿಲ್ಲ! ಸಾಯೋಕಿಲ್ಲ!
ಆರ್ಸಿ ಸಾಯ್ಸೋರ್ ನಾವು!

– ದುಕ್ಕ

ಈ ಸಾಲುಗಳು 'ರತ್ನನ ಪದಗಳು' ಕವನ ಸಂಕಲನದಲ್ಲಿ ಕಂಡು ಬರುತ್ತವೆ. ರಾಜರತ್ನಂ ಬದುಕಿನ ಒತ್ತಡಕ್ಕೆ ಮತ್ತು ಕೌಟುಂಬಿಕ ಒಂಟಿತನಕ್ಕೆ ಆಗಾಗ ಸಿಕ್ಕಿದ್ದರು ಎಂಬುದು ಅವರ ಬರಹಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ವ್ಯಕ್ತವಾಗಿದೆ. ಒಂಟಿತನ ಅವರನ್ನು ಬದುಕಿನ ಕೊನೆಯ ದಿನಗಳಲ್ಲಿ ಕಾಡಿತ್ತು. ಆಗ ಅವರು 'ಕಾದಂಬರಿ' ಮಾಸ ಪತ್ರಿಕೆಗೆ 'ನನ್ನ ನೆನಪಿನ ಬೀರು' ಅಂಕಣವನ್ನು ಬರೆಯುತ್ತಿದ್ದರು. 'ನನಗೆ ಅರವತ್ತು ಆದಾಗ' ಎಂಬ ಲೇಖನದಲ್ಲಿ 'ನನಗೆ ಅರವತ್ತು ಆದಾಗ ನನ್ನ ಕೈಯ ಹಿಡಿದಾಕೆ ಬದುಕಿದ್ದರೆ ನಾನು ಶಾಸ್ತ್ರೋಕ್ತವಾಗಿ ಅರುವತ್ತು ವರ್ಷದ ಶಾಂತಿಯನ್ನು ಮಾಡಿಕೊಳ್ಳುತ್ತಿದ್ದೆ. ನನಗಾಗಿ ಅಲ್ಲ ಆಕೆಯ ಸಂತೋಷಕ್ಕಾಗಿ..... ನನ್ನ ಅರುವತ್ತನೇ ಉತ್ಸವಕ್ಕೆ ಇಷ್ಟೆಲ್ಲ ಸಿದ್ಧತೆಗಳು ನಡೆಯುತ್ತಿದ್ದರೂ ನನ್ನ ಒಂಟಿತನದಿಂದ ನನಗೆ ಉಲ್ಲಾಸ ಕಡಿಮೆಯಾಗಿತ್ತು. ನನ್ನ ಸಂತೋಷವನ್ನು ಹಂಚಿಕೊಳ್ಳುವುದಕ್ಕಾಗಲಿ ಹೆಚ್ಚಿಸುವುದಕ್ಕಾಗಲಿ ಅಗತ್ಯವಾಗಿದ್ದ ಸಹಧರ್ಮಿಣಿ ಇರಲಿಲ್ಲ, ದೊಡ್ಡಮಗ ದೂರದ ಅಸ್ಸಾಮಿನಲ್ಲಿದ್ದ. ದೊಡ್ಡ ಮಗಳು ಬೊಂಬಾಯಿಯಲ್ಲಿದ್ದಳು. ಕೊನೆಯ ಮಗಳೊಬ್ಬಳು ಹತ್ತಿರ ಇದ್ದವಳಾದರೂ ಅವಳು ಇನ್ನೂ ಏನೂ ಅರಿಯದ ಮಗು' ಈ ಮಾತುಗಳು

ಅವರ ಒಂಟಿತನವನ್ನು ಸ್ಪಷ್ಟಪಡಿಸುತ್ತವೆ. ಅವರ ನೋವು-ನಲಿವುಗಳನ್ನು ಆತ್ಮೀಯವಾಗಿ ಹಂಚಿಕೊಳ್ಳುವವರು ಕೌಟುಂಬಿಕ ಪರಿಸರದಲ್ಲಿ ಇರಲಿಲ್ಲ.

ಈ ಶತಮಾನದ ಉತ್ತರಾರ್ಧದಲ್ಲಿ ಜಗತ್ತು ಬದಲಾದ ರೀತಿಯನ್ನು ಕಂಡರೆ ವಿಸ್ಮಯವಾಗುತ್ತದೆ. ಹಾಗೂ ಭಯವಾಗುತ್ತದೆ. ಸಾಂಪ್ರದಾಯಿಕ ಅವಿಭಕ್ತ ಕುಟುಂಬಗಳು ಛಿದ್ರಗೊಂಡವು. ಹೊಟ್ಟೆಪಾಡು ಮತ್ತು ಹೆಚ್ಚಿನ ವಿದ್ಯೆ ಒಂಟಿ ಸಂಸಾರಗಳನ್ನು ಹೆಚ್ಚಿಸಿದುವು. ವಯಸ್ಸಾದವರು ಒಂಟಿಯಾಗಿ ಬದುಕು ನೂಕುವುದು ಅನಿವಾರ್ಯವಾಯಿತು. ಹಣ ಸಂಪಾದನೆ, ವಿದೇಶ ವ್ಯಾಮೋಹ, ಹೆಚ್ಚಿನ ಅಧ್ಯಯನ ಅಂದಿಗಿಂತ ಇಂದಿನ ದಿನಗಳಲ್ಲಿ ಒಂಟಿತನದ ತಳಮಳಗಳನ್ನು, ಕ್ರೌರ್ಯವನ್ನು ಹೆಚ್ಚಿಸಿದೆ. ಇಳಿ ವಯಸ್ಸಿನಲ್ಲಿ ಒಟ್ಟಾಗಿ ಬಾಳಬೇಕಾದವರು ಅನಿವಾರ್ಯವಾಗಿ ಬೇರೆ ಬೇರೆ ಕಡೆ ಬದುಕುವ ಹತಾಶ ಪರಿಸ್ಥಿತಿ ಉಂಟಾಗಿದೆ. ಇಂದಿನ ದಾವಂತ ಬದುಕಿನಲ್ಲಿ ಪ್ರೀತಿ ಅಪರೂಪವಾಗಿ ಮಾನಸಿಕ ಆಘಾತಗಳು ಹೆಚ್ಚುತ್ತಿವೆ. ಮನುಷ್ಯ ಸಂಬಂಧಗಳಲ್ಲಿ ಬಿರುಕು ಹೆಚ್ಚಾಗಿ 'ನೆಮ್ಮದಿ'ಯ ಶಬ್ದ ನಿಘಂಟುವಿನಲ್ಲಿ ಭದ್ರವಾಗಿದೆ.

ರಾಜರತ್ನಂ ಅವರ ಪತ್ನಿ ಶ್ರೀಮತಿ ಸೀತಮ್ಮನವರು 1967ರಲ್ಲಿ ನಿಧನರಾದ ಮೇಲೆ ಅವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಗೌರವ ಡಾಕ್ಟರೇಟ್ ಪ್ರಶಸ್ತಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗಳ ಮಹಾಪೂರವೇ ಹರಿದುಬಂತು. ಇಷ್ಟೆಲ್ಲದರ ಮಧ್ಯೆ ರಾಜರತ್ನಂ ಒಂಟಿಯಾಗಿದ್ದರು. ಸಂತೋಷವನ್ನು ಮುಗ್ಧವಾಗಿ, ಮುಚ್ಚುಮರೆಯಿಲ್ಲದೆ ಹಂಚಿಕೊಳ್ಳುವವರು ದೂರ ಸರಿದಿದ್ದರು. ಅವರ ಬದುಕಿನ ಕೊನೆಯ ಕಾಲದಲ್ಲಿ ನಾನು ಅವರನ್ನು ಹೆಚ್ಚಾಗಿ ಹಚ್ಚಿಕೊಂಡಿದ್ದೆ. ವಾರಕ್ಕೆ ಒಮ್ಮೆಯಾದರೂ ಹೋಗಿ ನೋಡದಿದ್ದರೆ ಸಮಾಧಾನವಾಗುತ್ತಿರಲಿಲ್ಲ. ಅವರು ಕಂಡ ಕಂಡವರ ಹತ್ತಿರ ಸಂಸಾರದ ಗುಟ್ಟನ್ನು ರಟ್ಟು ಮಾಡುತ್ತಿರಲಿಲ್ಲ. ಯಾವುದೇ ವ್ಯಕ್ತಿಯ ಬಗ್ಗೆ ಸಂಪೂರ್ಣ ನಂಬಿಕೆ ಬರುವವರೆಗೂ ಆ ವ್ಯಕ್ತಿಯನ್ನು ಮನೆಗೆ ಸೇರಿಸುವುದಿರಲಿ ಹತ್ತಿರವೂ ಬಿಟ್ಟುಕೊಳ್ಳುತ್ತಿರಲಿಲ್ಲ.

ನಾನು ಕನ್ನಡ ಎಂ.ಎ., ಓದುವಾಗ ಹರಿಹರ ಕವಿಯನ್ನು ವಿಶೇಷವಾಗಿ ಅಧ್ಯಯನ ಮಾಡಬೇಕಿತ್ತು. ಆ ಕವಿಯನ್ನು, ಅವನ ಕೃತಿಗಳನ್ನು ನಮಗೆ ಪರಿಚಯಿಸಿದವರು ರಾಜರತ್ನಂ. ಅವರ ಮನೆ ಮತ್ತು ನಮ್ಮ ಮನೆ ಒಂದೇ ದಿಕ್ಕಿನಲ್ಲಿ ಇದ್ದುದರಿಂದ ಅನೇಕ ವೇಳೆ ಒಟ್ಟಿಗೆ ಹೋಗುತ್ತಿದ್ದೆವು. ಆ ಸಂದರ್ಭಗಳಲ್ಲಿ ಅವರ ಜೊತೆಯಲ್ಲಿ ಸ್ವಲ್ಪದೂರ ನಡೆಯುವುದು, ಕೆಲವು ಬಾರಿ

ಅವರ ಮನೆಯವರೆಗೂ ಹೋಗಿ ಅನಂತರ ನಮ್ಮ ಮನೆಯ ಕಡೆ ಹೆಜ್ಜೆ ಹಾಕುತ್ತಿದ್ದೆ. ಅವರ ಜೊತೆಯಲ್ಲಿ ಹೋಗುವಾಗ ಮಾತಾಡುವಾಗ ಒಂದು ರೀತಿಯ ಭಯ ಮಿಶ್ರಿತ ಹೆಮ್ಮೆ, ಗೌರವ ಹಾಗೂ ಸಂಕೋಚ. ಆಗ ನನ್ನ ಮನಸ್ಸಿನಲ್ಲಿ ಒಂದು ವಿಷಯ ಕಾಡುತ್ತಿತ್ತು. ಮೇಷ್ಟ್ರ ಮನೆಯವರೆಗೆ ಇಷ್ಟು ಬಾರಿ ಹೋಗಿದ್ದೇನೆ, ಒಂದು ಸಲವಾದರೂ ಒಳಗೆ ಬಾ ಎನ್ನಲಿಲ್ಲವಲ್ಲ ಎಂದು. ಅವರು ಯಾರನ್ನು ಅಷ್ಟು ಸಲೀಸಾಗಿ ಒಳಗೆ ಬಿಟ್ಟುಕೊಳ್ಳುತ್ತಿರಲಿಲ್ಲ. ಹೀಗೆ ಎಷ್ಟೋ ದಿನಗಳು ಅವರ ಜೊತೆಯಲ್ಲಿ ಅಡ್ಡಾಡಿದ ಮೇಲೆ ಒಂದು ದಿನ ಮನೆಯ ಒಳಕ್ಕೆ ಕರೆದರು. ನನಗೆ ದಿಗ್ವಿಜಯ ಮಾಡಿದಷ್ಟು ಸಂತೋಷ. ಅವರು ಮುಂದೆ ಹೋದರು, ನಾನು ಹಿಂಬಾಲಿಸಿದೆ. ವರಾಂಡದಲ್ಲಿ ಬೆತ್ತದ ಕುರ್ಚಿಗಳನ್ನು ಹಾಕಿದ್ದರು. ಒಂದನ್ನು ತೋರಿಸಿ ಕುಳಿತುಕೊಳ್ಳಿ ಎಂದರು. ನಾನು ಸಂಕೋಚದಿಂದ, ಸಂತೋಷದಿಂದ ಮುದುಡಿಕೊಂಡು ಕುಳಿತೆ. ಅವರು ನನ್ನೆದುರಿನ ಕುರ್ಚಿಯಲ್ಲಿ ಕುಳಿತು ತಕ್ಷಣ ಗೇಟಿನ ಕಡೆ ಒಮ್ಮೆ ನೋಡಿದರು. ಅದು ತೆರೆದುಕೊಂಡಿತ್ತು. ಅವರ ಹಿಂದೆ ಬಂದ ನಾನು ಅದನ್ನು ಮುಚ್ಚಿರಲಿಲ್ಲ. ಬಂದೆ ಎಂದು ಎದ್ದುಹೋಗಿ ಗೇಟು ಮುಚ್ಚಿ ಚಿಲಕ ಹಾಕಿಕೊಂಡು ಬಂದು ಕುಳಿತರು. 'ನೋಡಿ, ಗೇಟು ತೆರೆದು ಹಾಕಿದ್ದರೆ ರಸ್ತೆಯಲ್ಲಿ ಹೋಗುವ ಕತ್ತೆಗಳು, ನಾಯಿಗಳು ಒಳಗೆ ನುಗ್ಗುತ್ತವೆ' ಎಂದು ಹೇಳಿ, ಹೊದ್ದುಕೊಂಡಿದ್ದ ಉತ್ತರೀಯವನ್ನು ತೆಗೆದು ಕುರ್ಚಿಯ ತೋಳಿನ ಮೇಲೆ ಹಾಕಿದರು. ಅದರಿಂದ ಮುಖಕ್ಕೆ ಒಂದೆರಡು ಬಾರಿ ಗಾಳಿ ಹಾಕಿಕೊಂಡರು. ಅವರು ಹೇಳಿದ ಗತ್ತಿನಿಂದ ನಾನು ಕುಗ್ಗಿಹೋದೆ. ನನ್ನನ್ನು ನಾನೇ ಒಮ್ಮೆ ನೋಡಿಕೊಂಡೆ. ಅಂದಿನಿಂದ ರಾಜರತ್ನಂ ಮನೆಗೆ ಹೋದಾಗಲೆಲ್ಲ ಮೊದಲು ಗೇಟು ಮುಚ್ಚುವುದನ್ನು ಮರೆಯಲಿಲ್ಲ. ಮೊದಮೊದಲು ಐದಾರು ನಿಮಿಷ ಕೂಡುತ್ತಿದ್ದ ನಾನು ನಿಧಾನವಾಗಿ ಇಪ್ಪತ್ತು ಮೂವತ್ತು ನಿಮಿಷ ಕೂಡುವ ಸಲಿಗೆ ಬೆಳೆಸಿಕೊಂಡೆ. ನೀರು ಕುಡಿಯುವುದರಿಂದ ಪ್ರಾರಂಭಿಸಿ ಚಿಕ್ಕಮಗಳು ಶ್ರೀಲತಾ ಅಥವಾ ಮೊಮ್ಮಗ ಕಾಫಿ/ಹಾಲು ತಂದುಕೊಡುವಷ್ಟು ನಂಬಿಕೆ ಗಳಿಸಿಕೊಂಡೆ. ಹಬ್ಬ ಹರಿದಿನಗಳಲ್ಲಿ ತಿಂಡಿಯನ್ನು ಸಂಪಾದಿಸಿದೆ. ಹೀಗೆ ಅವರ ಮನೆಯನ್ನು ಮನವನ್ನು ಪ್ರವೇಶಿಸುವ ಅವಕಾಶ ದೊರೆಯಿತು.

ರಾಜರತ್ನಂ ಕೊನೆಕೊನೆಯ ದಿನಗಳಲ್ಲಿ ಕಾಡುವ ಒಂಟಿತನವನ್ನು ತಪ್ಪಿಸಿಕೊಳ್ಳಲು ತಮಗೆ ಪ್ರಿಯವಾದ ಸಾಹಿತ್ಯ ಪರಿಚಾರಿಕೆಯಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುತ್ತಿದ್ದರು. ಕಿರಿಯ ಮಗಳಿಗೆ ಮದುವೆ ಮಾಡಿಬಿಡಬೇಕೆಂಬುದು

ಮನಸ್ಸಿಗೆ ಬಂದಿತ್ತು. ಆದರೆ ಯಾರಿಗೂ ತಲೆತಗ್ಗಿಸುವ, ಯಾರನ್ನೂ ಅಂಗಲಾಚುವ ಸ್ವಭಾವ ಅವರದಾಗಿರಲಿಲ್ಲ. ಅವರಿಗೆ ಸಕ್ಕರೆ ಕಾಯಿಲೆ ಇದ್ದರೂ ಕಾಲಿಗೆ ಸರಿಯಾಗಿ ಚಪ್ಪಲಿ ಹಾಕದೆ ನಡೆಯುವುದು, ಆಗಾಗ ಬಾಯ ಚಪಲದಿಂದ ಹೋಟೆಲಿಗೆ ನುಗ್ಗುವುದು ಇದ್ದೇ ಇತ್ತು. ಆರೋಗ್ಯದ ಉಪೇಕ್ಷೆಯಿಂದ ಅವರ ಕಾಲಬೆರಳು ಗಾಯವಾಗಿ, ರಣವಾಗಿ ವೈದ್ಯರು ಕಾಲನ್ನು ತೆಗೆಯಬೇಕೆಂಬ ಆಲೋಚನೆಯನ್ನು ಮಾಡುವ ಮಟ್ಟಕ್ಕೂ ಹೋಯಿತು. ಒಂಟಿತನ ಅನೇಕರನ್ನು ಅನೇಕ ರೀತಿಯಲ್ಲಿ ದಾರಿ ತಪ್ಪಿಸುತ್ತದೆ. ಒಂಟಿತನ ಕುಡಿತ ಜೂಜುಗಳ ದಾಸ್ಯಕ್ಕೆ ದೂಡುತ್ತದೆ; ಒಂಟಿತನ ಮನೋವ್ಯಾಧಿಯಾಗಿ ವ್ಯಕ್ತಿತ್ವವನ್ನು ಕುಗ್ಗಿಸುತ್ತದೆ; ಒಂಟಿತನ ಒಣ ಪ್ರದರ್ಶನಗಳ ಮುಖವಾಡಗಳಲ್ಲಿ ಅಡಗುತ್ತದೆ; ಒಂಟಿತನ ಭಕ್ತಿ ಭಜನೆಗಳಲ್ಲಿ ಮುಳುಗಿಸುತ್ತದೆ; ಒಂಟಿತನ ಆರೋಗ್ಯದ ಉಸ್ತುವಾರಿಯನ್ನು ಉಪೇಕ್ಷಿಸುತ್ತದೆ; ಒಂಟಿತನ ಎಷ್ಟೋ ಬಾರಿ ಆತ್ಮಹತ್ಯೆಗೂ ಕಾರಣವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಒಂಟಿತನ ಮನೆಯೊಳಗಿದ್ದೂ ಮನೆಯೊಳಗಿರದ ಪ್ರಸಂಗಗಳನ್ನು ಉಂಟುಮಾಡುತ್ತದೆ. ಆದರೆ ಒಂಟಿತನವನ್ನು ಸಾರ್ವಜನಿಕ ಕೈಂಕರ್ಯದಲ್ಲಿ ತೊಡಗಿಸುವುದು ಅಪರೂಪ. ರಾಜರತ್ನಂ ತಮ್ಮ ಒಂಟಿತನವನ್ನು ಸಾಹಿತ್ಯ ಪರಿಚಾರಿಕೆಯಾಗಿ ಪರಿವರ್ತಿಸಿಕೊಂಡರು. ಅವರನ್ನು ಕೇಳಿದವರ, ಓದಿದವರ ಮನವನ್ನು ಹದಗೊಳಿಸಿ ಮುದ ನೀಡಿದರು.

## ತುಂಬಲಾಗದ್ದು

ಅವರ ಸಾವು
ತುಂಬಲಾರದ ನಷ್ಟ
ಎಂಬುದು ಸುಳ್ಳಲ್ಲ
ಯಾರೂ ತುಂಬಲು
ತಯಾರಿಲ್ಲ
ಅವರ ಸಾಲ!

– ಎಚ್. ಡುಂಡಿರಾಜ್

# ತಪ್ಪು ತಪ್ಪು ತಪ್ಪು

– ಕುಮುದಾ ಪುರುಷೋತ್ತಮ್

ಈಚೆಗೆ ಬಿಲ್ ಕ್ಲಿಂಟನ್‌ರು ಮಾಡಿದ ತಪ್ಪೊಪ್ಪಿಗೆ ಭಾಷಣವನ್ನು ನೀವೂ ಕೇಳಿರಲಿಕ್ಕೇಬೇಕು. ಸ್ವಾಭಾವಿಕವಾಗಿಯೇ ಕೆಂಪಾಗಿರುವ ಆತ ಮುಖವನ್ನು ಮತ್ತೂ ಕೆಂಪಾಗಿಸಿಕೊಂಡು ನಾನು ಮಾಡಿದ್ದು ಬಲು ದೊಡ್ಡ ತಪ್ಪು. ನಾನು ಸ್ವಲ್ಪ ವಿವೇಚನೆಯಿಂದಿರಬೇಕಿತ್ತು. ನಾನು ನನ್ನ ಕುಟುಂಬದ, ಆ ಮತ್ತೊಬ್ಬ ಮಹಿಳೆಯ ಮತ್ತು ಅವಳ ಕುಟುಂಬದ ಕ್ಷಮಾಪಣೆ ಕೇಳುತ್ತೇನೆ ಎಂಬ ಅಪರಾಧ ಕ್ಷಮಾಪಣಾ ಸ್ತೋತ್ರ ಪಠಿಸಿದಾಗ ನಿಮಗೇನೆನ್ನಿಸಿತೋ ಕಾಣೆ. ನನಗನಿಸಿದ್ದು ಎರಡು. ಒಂದು, ನಮ್ಮ ದೇಶದಲ್ಲಿ ಇಂತಹದ್ದು ಘಟಿಸಿದ್ದರೆ (ಇದ್ದರೆ ಏನು, ಇದು ಕಾಮಸೂತ್ರದ ತೌರೂರಲ್ಲವೇ? ಘಟಿಸಿಯೇ ಘಟಿಸಿರುತ್ತದೆ) ಏನಾಗುತ್ತಿತ್ತು? ಗಾಬರಿ ಬೇಡ. ಏನೂ ಆಗುತ್ತಿರಲಿಲ್ಲ. ಇದರಪ್ಪನಂತಹ ತಪ್ಪು ಮಾಡಿದವರೂ ಖಂಡಿತಾ ತಪ್ಪೊಪ್ಪಿಗೆ ಮಾಡುತ್ತಿರಲಿಲ್ಲ. ನಾನು ನಿರಪರಾಧಿ. ನನಗಾಗದವರು ನನ್ನ ಚಾರಿತ್ರ್ಯಕ್ಕೆ ಮಸಿ ಬಳೆಯಲು ರಾಜಕೀಯ ಮಾಡುತ್ತಿದ್ದಾರೆ. ನಾನು ಸಾಕ್ಷಾತ್ ಶ್ರೀರಾಮನಂತಹವನು ಇತ್ಯಾದಿ ಇತ್ಯಾದಿಯಾಗಿ ಪ್ರಮಾಣ ಮಾಡಿಬಿಡುತ್ತಿದ್ದರು. ಇದಕ್ಕೆ ಪೂರಕವಾಗಿ ಸಂಬಂಧಪಟ್ಟ ಸಕಲ ಸಂಸ್ಥೆಗಳೂ ಒಂದುಗೂಡಿ ಆಧಾರ, ಸಾಕ್ಷಿಗಳನ್ನೂ ಮಟ್ಟ ಹಾಕಿ ಸತ್ಯವನ್ನು ಹುಗಿದು ಸಮಾಧಿ ಮಾಡಿಬಿಡುತ್ತಿದ್ದುವು. ಅಪರಾಧಿ ಅಟ್ಟಹಾಸಗೈಯುತ್ತಾ ಹೊರ ಬರುತ್ತಿದ್ದ. ಮತ್ತೆ ನಾಯಕ ಮಣಿಯಾಗಿ ರಾರಾಜಿಸುತ್ತಿದ್ದ. ಅಮೇರಿಕೆಯಲ್ಲಿ ಹಾಗಾಗಲಿಲ್ಲ. ಸರ್ವತಂತ್ರ ಸ್ವತಂತ್ರನಾದ ತನಿಖಾಧಿಕಾರಿ ವೈಜ್ಞಾನಿಕ ಆಧಾರ ಮೇಲೆ ತನಿಖೆ ನಡೆಸಿ ಅಂಕೆ ಶಂಕೆ ಇಲ್ಲದೆ ತನ್ನ ವರದಿಯನ್ನು ನ್ಯಾಯಾಂಗದ ಮುಂದಿಟ್ಟ. ಮುಂದೆ ನಡೆದದ್ದು ತಪ್ಪೊಪ್ಪಿಗೆ. ಒಮ್ಮೆಯಲ್ಲ ಹಲವಾರು ಬಾರಿ, ಮುಂದೆ ಶಿಕ್ಷೆಯಾಗಲಿ ಬಿಡಲಿ ಅಧ್ಯಕ್ಷರ ಮುಖದ ನೀರಿಳಿಸಿದ್ದಂತೂ ನಿಜ. ಆ ವ್ಯವಸ್ಥೆಯನ್ನು ಯಾರಾದರೂ ಮೆಚ್ಚಲೇಬೇಕು.

ಎರಡನೇ ಅನಿಸಿಕೆ ಹೀಗಿದೆ. ಭಾರತೀಯರು ನಾವೇಕೆ ತಪ್ಪು ಒಪ್ಪಿಕೊಳ್ಳುವುದಿಲ್ಲ? ಲೋಕ ತಂತ್ರದಲ್ಲಿ ಪ್ರಜೆಗಳೇ ಪ್ರಭುಗಳು ಎಂದು ಪಠ್ಯ ಪುಸ್ತಕಗಳು ಸಾರಿ ಸಾರಿ ಹೇಳುತ್ತವೆ. ಯಥಾ ರಾಜಾ ತಥಾ ಪ್ರಜಾ ಎಂಬುದು ಹಳೆಯ ಬೊಂತೆ. ಯಥಾ ಪ್ರಜಾ ತಥಾ ರಾಜ ಹೆಚ್ಚು ಪ್ರಸ್ತುತ. ದೇಶದ ಪರಿಸ್ಥಿತಿ ಹದಗೆಟ್ಟರೆ ಯಾರನ್ನೋ ಏಕೆ ದೂಷಿಸಬೇಕು? ಮತ ಚಲಾಯಿಸುವುದು ನಾವೇ ತಾನೇ? ಮಾಡಿದ್ದುಣ್ಣೋ ಮಹರಾಯ ತಪ್ಪಿಸಲು ಸಾಧ್ಯವೇ? ನಮ್ಮ ಹೊಣೆ

ಅರಿತು ಜವಾಬ್ದಾರಿಯಿಂದ ಮತ ಚಲಾಯಿಸಿದರೆ ಯಾರಾದರೂ ಬೇಡ ಎನ್ನುತ್ತಾರೆಯೇ?

ಶೇಖರಿಸಿದ್ದ ಕಪ್ಪು ಕಪ್ಪಾದ ಹಣವನ್ನು ಇಡಲು ಸ್ಥಳವಿಲ್ಲದೆ ಮನೆಯ ಕಾರ್ ಶೆಡ್ಡಿನಲ್ಲಿ ಗೋಣಿ ಚೀಲದ ತುಂಬಾ ತುಂಬಿಟ್ಟವರು ಮತ್ತೆ ನಮ್ಮ ಮುಂದೆ ಬಂದು ನಸು ನಗುತ್ತಾ ಕೈ ಮುಗಿದು ಭಿಕ್ಷಾ ಪಾತ್ರೆ ಹಿಡಿದಾಗ ಆದದ್ದೆಲ್ಲಾ ಮರೆತು ಸಮ್ಮೋಹನಕ್ಕೊಳಗಾಗಿ ಮತ ನೀಡಿಯೇ ಬಿಡುತ್ತೇವೆ. ಆಮೇಲೆ ಅವರೆಲ್ಲೋ ನಾವೆಲ್ಲೋ. ಇದು ನಮ್ಮದೇ ತಪ್ಪಲ್ಲವೇ?

ಮನುಷ್ಯರಿರಲಿ, ಮೂಕ ಪ್ರಾಣಿಗಳ ಮೇವು ಹಣವನ್ನೂ ನುಂಗಿ ನೀರು ಕುಡಿದು ಖುರ್ಚಿ ಖಾಲಿ ಮಾಡಲೇಬೇಕಾದಾಗಲೂ ಸೂತ್ರದ ಬೊಂಬೆಯೊಂದನ್ನು ಖುರ್ಚಿಯಲ್ಲಿ ಕೂಡಿಸಿ ಅದರ ಜೊತೆ ಸಂವಿಧಾನವನ್ನೂ ಆಟವಾಡಿಸುತ್ತಾ ವ್ಯವಸ್ಥೆಯನ್ನೇ ಮುಠ್ಠಾಳಗೊಳಿಸುತ್ತಾ ಇರುವವರು ಮತ್ತೆ ನಮ್ಮ ಮುಂದೆ ಬಂದು ನಿಂತಾಗ ಏಕೀಕರಣಗೊಂಡು ಮತವನ್ನು ನೀಡಿಯೇ ಬಿಡುತ್ತೇವೆ. ಇದ್ಯಾರ ತಪ್ಪು?

ಎಣ್ಣೆ ಸೀಗೇಕಾಯಿ ಮನೋಭಾವ ಬೆಳೆಸಿಕೊಂಡು 'ಅಹಂ' ವಿಜೃಂಭಿಸುತ್ತಾ ದೇಶದ ಸ್ಥಿರತೆ ಅಲ್ಲಾಡಿಸುವ ಬೆದರಿಕೆ ನೀಡುತ್ತಾ ಮೆರೆಯುವವರು ಮತ್ತೆ ನಮ್ಮ ಮುಂದೆ ಬಂದು ಕೈ ಮುಗಿದಾಗ ಕುರಿಯಂತೆ ತಲೆ ತಗ್ಗಿಸಿ ತಲೆಯಲ್ಲಿರುವುದಕ್ಕೆ ಪೂರ್ಣ ವಿರಾಮ ನೀಡಿ ಮತ ನೀಡಿಬಿಡುತ್ತೇವೆ. ಇದಕ್ಕಿಂತ ದೊಡ್ಡ ಅಪರಾಧವೆಲ್ಲಿದೆ?

ಮೂರು ಕಾಸಿತ್ತರೆ ಸೊಸೆ, ಆರು ಕಾಸಿತ್ತರೆ ಅತ್ತೆ ಎನ್ನುವಂತೆ ಅತ್ತಿಂದಿತ್ತ ಇತ್ತಿಂದತ್ತ ಓಲಾಡುತ್ತಾ ಗಾಳಿ ಬಂದ ಕಡೆ ತೂರುತ್ತಾ, ಸ್ಥಾನ ಬಲವನ್ನು ಆಗಾಗ ಹರಾಜಿಗೆ ಹಾಕುತ್ತಾ ನ್ಯಾಯ, ನೀತಿ, ನಿಯಮಕ್ಕೆಲ್ಲಾ ಎಳ್ಳು ನೀರು ಬಿಟ್ಟು ಮುಂದೆ ಬಂದು ಕೈ ನೀಡಿದಾಗ ಅವರು ನೀಡುವ ಮದಿರೆ, ಕಾಸಿಗೆ ಮನಸೋತು ಮತ ಕೊಟ್ಟು ಬಿಡುತ್ತೇವೆ. ದಕ್ಷತೆ, ಪ್ರಾಮಾಣಿಕತೆ ಹಿಂದೆ ತಳ್ಳಿ ಜಾತಿ, ಮತ, ಕೋಮಿಗೆ ಆದ್ಯತೆ ನೀಡಿಬಿಡುತ್ತೇವೆ.

ಇದೆಲ್ಲಾ ನಮ್ಮದೇ ತಪ್ಪು ತಾನೇ? ನಾವೂ ಅಪರಾಧ ಕ್ಷಮಾಪಣಾ ಸ್ತೋತ್ರ ಪಠಿಸೋಣವೇ? ಕೆನ್ನೆಗೆರಡು ಬಾರಿಸಿಕೊಂಡು ಹೇಳೋಣ.

ತಪ್ಪು ತಪ್ಪು ತಪ್ಪು

★★★

# ಒಂದ್ ಕೆಲಸ ಮಾಡಿ...!

**- ಜಯಶ್ರೀ ದೇಶಪಾಂಡೆ**

ರಮಾಕಾಂತ ಪಂಡಿತ್‌ಗೆ ತುರ್ತಾಗಿ ರಾಜಧಾನಿಗೆ ಹೊರಡುವ ಕೆಲಸ ಬಿತ್ತು. ಪ್ರಭಾಕರನ ಮಗಳ ಮದುವೆ. ಇವನ ಮಗಳ ಮದುವೆ ಸಮಯದಲ್ಲಿ ಪ್ರಭಾಕರ ರಾಜಧಾನಿಯಿಂದ ಇವನ ಜಿಲ್ಲೆಗೆ ಬಂದು ಆ ಕೆಲಸ, ಈ ಕೆಲಸ ಎಂದು ಸಹಾಯ ಹಸ್ತವನ್ನೂ ಚಾಚಿ ಗೆಳೆಯನ ಸಂತೋಷವನ್ನು ಹೆಚ್ಚಿಸಿದ್ದ. ಈಗ ಅದನ್ನು ರಿಟರ್ನ್ ಮಾಡಬೇಕಾಗಿದೆ.

ಪಂಡಿತ ರಾತ್ರಿ ಎಂಟಕ್ಕೆ ಉಂಡು ರಾಜಧಾನಿಗೆ ಹೊರಟಿದ್ದ ಬಸ್ಸು ಏರಿದ. ಹದಿನೈದು ವರ್ಷಗಳಿಂದ ಘಟ್ಟದ ದಾರಿಯಲ್ಲೇ ಬಸ್ಸು ಓಡಿಸಿ ಪಳಗಿದ್ದ ಚಾಲಕ ಕರಾರುವಕ್ಕಾಗಿ ನಸುಕಿನ ಆರುಗಂಟೆಗೇ ಪ್ರಯಾಣಿಕರನ್ನು ಪುರಪ್ರವೇಶ ಮಾಡಿಸಿದಾಗ

''ಯಾರ್ರೀ ನವರಂಗ್?... ನವರಂಗ್ ಇಳೀರ್ರೀ...'' ಎಂದು ನಿರ್ವಾಹಕ ಅರಚಿದ.

ಎದ್ದು ದಡಬಡಾಯಿಸಿ ತಲೆ ಮೇಲಿನ ಗಂಟು ಮೂಟೆಗಳನ್ನು ಇಳಿಸಿಕೊಂಡು ಇಳಿದ ನಾಲ್ಕಾರು ಜನರೊಟ್ಟಿಗೆ ಪಂಡಿತನೂ ಇಳಿದ.

ಪ್ರಭಾಕರ ಮೊನ್ನೆ ಫೋನು ಮಾಡಿದಾಗ ''ನವರಂಗ್ ಹತ್ತಿರ ನೀನಿಳಿದುಬಿಟ್ಟರೆ ಆಟೋರಿಕ್ಷಾದವರ ಹತ್ರ ಹೋಗಬೇಡ. ಬೆಳಿಗ್ಗೆ ಆರಕ್ಕೇ ಒಂದೂವರೆ ದರ ಮುಗಿದು ಮಾಮೂಲಿ ಚಾರ್ಜು ಆರಂಭ ಆದರೂ ಅದು ಆಟೋ ಡ್ರೈವರುಗಳಿಗೆ ಮಾತ್ರ ಗೊತ್ತಿರುವುದಿಲ್ಲ. ಎರಡು ಮೂರು ಫರ್ಲಾಂಗು ನಡೆಯೋದು ನಿನಗೇನು ಮಹಾ ಕಷ್ಟ ಅಲ್ಲ... ಅಷ್ಟು ಹತ್ತಿರ ಇದೆ ನಮ್ಮನೆ. ಸೀದಾ ಹೊರಟುಬಿಡು. ತೊಗೋ ಅಡ್ರೆಸ್ಸು ಬರಕೋ'' ಎಂದು ಹೇಳಿದವನು ಮತ್ತೆ ನಮ್ಮನೆ ಹತ್ರ ಹೊಸದಾಗಿ ಕಂಪ್ಯೂಟರ್ ಕೇಂದ್ರ ಶುರು ಆಗಿದೆ. ಟೆಕ್‌ಟೆಕ್ ಟೆಕ್ನಾಲಾಜೀಸ್ ಅಂತ. ಯಾರನ್ನ ಕೇಳಿದರೂ ತೋರಿಸ್ತಾರೆ ಅದರ ಹಿಂಭಾಗದ ಕ್ರಾಸ್ ಸೇರಿಬಿಟ್ರೆ ಮುಗೀತು'' ಎಂದು ಮುಗಿಸಿದ್ದ.

ಪಂಡಿತ ''ಇಷ್ಟೆ, ತಾನೆ? ನಾಳಿದ್ದು ಬೆಳಿಗ್ಗೆ ಏಳು ಗಂಟೆಯೊಳಗಾಗಿ ನಿನ್ನ ಮನೆಯಲ್ಲಿರ್ತೀನಿ ಬಿಡು ಹಾಗಾದ್ರೆ. ಓಕೆ. ಸೀಯೂ ಟುಮಾರೋ... ಅಂದ ಹಾಗೆ ನನ್ನ ಪಾಲಿನ ಕೆಲಸ ನಂಗಿಟ್ಟು ಬಿಡು ಮತ್ತೆ ತಿಳೀತಾ?'' ಎಂದು ನಕ್ಕವನು ಬ್ಯಾಗು ತುಂಬಿಸಿಕೊಂಡಿದ್ದ. ದೀಪು ಅಂದ್ರೆ ದೀಪಿಕಾ ಅರ್ಥಾತ್ ಮದುವೆ ಹೆಣ್ಣಿಗೆ ಹಲಸಿನ ಹಣ್ಣು ಅಂದರೆ ಪ್ರಾಣ. ಅವಳ ಗಂಡನ ಮನೆ ಇರೋದು ಬಿಸಿಲು

ಉಕ್ಕುವ ಬೆಲವಳ ನಾಡಿನಲ್ಲಿ! ಪಾಪ ಅಲ್ಲಿಗೆ ಹೋದ ನಂತರ ಈ ಹಣ್ಣು - ಅದೂ ಕರಾವಳಿಯ ಅಪ್ಪಟ ರುಚಿ ಎಲ್ಲಿಂದ ಸಿಕ್ಕೀತು ಅವಳಿಗೆ ಎಂದು ಯೋಚಿಸಿ ಎರಡು ಹಲಸಿನ ಹಣ್ಣು ದಾರಕಟ್ಟಿ ಸೀಟಿನಡಿಗೆ ಹಾಕಿಸಿದ್ದ. ಅವಕ್ಕೆ ಇಷ್ಟು ತೂಕ ಇರುತ್ತದೆ ಎಂದು ಈಗ ಅಂದರೆ - ಎರಡನ್ನೂ ಭುಜಕ್ಕೇರಿಸಿ ನಡೆಯುವಾಗ ನೆನಪಾಯಿತು.

ಪ್ರಭಾಕರ ಅವನ ಮನೆಯ ದಾರಿ ಹೇಳಿದ್ದನ್ನು ಇನ್ನೊಮ್ಮೆ ನೆನಪಿಸಿಕೊಂಡ ''ಮೊದಲು ಸುಮಾರು ಇನ್ನೂರಡಿ ಉದ್ದಕ್ಕೆ ನಡೆದರೆ ಮೂರನೆಯ ಎಫ್ ಕ್ರಾಸ್ ಸಿಗುತ್ತೆ. ಅದು ಎರಡನೆಯ ಬ್ಲಾಕು... ಹಾಗೆ ಎರಡು ಮತ್ತು ಮೂರನೆಯ ಬ್ಲಾಕಿನ ನಡುವಿನ ಮೈನ್‌ನಲ್ಲೇ ನಮ್ಮ ಮನೆ. ಆದರೆ ಈ ಬದಿಯಿಂದ ಮೈನ್ ಆದರೆ ರಸ್ತೆ ಕೊನೇ ಮುಟ್ಟೋವಾಗ ಕ್ರಾಸ್ ಆಗಿ ತಿರುಗಿಕೊಳ್ಳುತ್ತೆ ಅಷ್ಟೆ. ಏನೂ ತೊಂದರೆಯಿಲ್ಲ... ಸಲೀಸಾಗಿ ಬಂದುಬಿಡ್ತೀಯ...''

ಪಂಡಿತ್ ನಡೆದ... ನಡೆದೇ ನಡೆದ. ಚುಮು ಚುಮು ಇದ್ದ ಬೆಳಕು ಬೆಳ್ಳನ ಬೆಳಗಾಯಿತು. ಲಾರಿಗಳು, ಕಾರುಗಳು, ಬಸ್ಸು, ರಿಕ್ಷಾ... ಮೊಪೆಡ್ಡುಗಳು ರಸ್ತೆಗಿಳಿದು ರೇಸು ಆರಂಭಿಸಿದುವು. ಪಂಡಿತನಿಗೆ ಆಶ್ಚರ್ಯ 'ಇನ್ನೂರಡಿ ಉದ್ದ ಮುಗಿಯುತ್ತಲೇ ಇಲ್ಲ!'' ಅಷ್ಟರೊಳಗಾಗಿ ಮೂರನೆಯ ಎಫ್ ಕ್ರಾಸಿನ ಫಲಕ ಕಂಡುಬಂದು ಹಿರಿ ಹಿರಿ ಹಿಗ್ಗಿಹೋದ. ಇನ್ನೇನು ಮೈನ್ ಒಂದು ಸಿಕ್ಕುಬಿಟ್ಟರೆ ಪ್ರಭಾಕರನ ಮನೆ ಬಂದೇಬಿಟ್ಟಂತೆ. ಮೊದಲು ಆ ಕಂಪ್ಯೂಟರ್ ಕೇಂದ್ರ ಸಿಗಬೇಕು. ಎಲ್ಲಿದೆ ಅದು? ಅಂದ ಹಾಗೆ ಅದರ ಹೆಸರೇನು? ಟೆಕ್ ಟೆಕ್ ಟೆಕ್ನಾಲಜಿ ಯಾ... ಎಲ್ಲಿದೆ ಅದು?

ಇದೀಗ ಹಲಸಿನ ಹಣ್ಣುಗಳು ತಮ್ಮ ತೂಕವನ್ನು ಸರಿಯಾಗಿ ತಿಳಿಸತೊಡಗಿದ್ದುವು!

ಬೆನ್ನು ಆ ತೂಕಕ್ಕೆ ಬೆದರಿ ಬಾಗಿ ''ಇನ್ನು ಹೀಗೇ ಉಳಿದುಬಿಟ್ಟೇನು...'' ಎಂದು ಹೆದರಿಸಿತು... ಕಾಲುನೋವು ಸಹ ಅದಕ್ಕೆ ಜತೆಕೊಟ್ಟಿತು.

'ಮೂರು ಫರ್ಲಾಂಗಿಗಿಂತ ಹೆಚ್ಚು ನಡೆದಿದ್ದೇನೆ' ಎಂದು ಈಗ ಇವನಿಗೆ ಅನುಮಾನ ಮೂಡಿತು. ಯಾರನ್ನಾದರೂ ಪತ್ತೆ ಕೇಳಬೇಕೆನಿಸಿ ಎದುರಾಗಿ ಸೈಕಲ್ಲೇರಿ ಬಂದಾತನೊಬ್ಬನನ್ನು ಮಾತನಾಡಿಸಿ ವಿಚಾರಿಸಿದ.

''ಏನಂದ್ರಿ? ಟೆಕ್ ಟೆಕ್ ಕಂಪ್ಯೂಟರಾ? ಅದು ಇಲ್ಲೆಲ್ಲಿ ಬರುತ್ತೆ?'' ಅವನು ಕೇಳಿದ.

''ನನ್ನ ಫ್ರೆಂಡು ಹಾಗೇ ಹೇಳಿದ್ದಾರೆ... ಅದಕ್ಕೆ...'' ಇವನು ತೊದಲಿದ.

''ಓ ಹೌದೆ? ಹಾಗಾದ್ರೆ ನೀವು ಒಂದ್ ಕೆಲಸಾ ಮಾಡಿ. ಇದೇ ನೇರದಲ್ಲಿ ಉದ್ದಕ್ಕೆ ಅಷ್ಟು ದೂರ ಹೋಗ್ಬಿಡಿ ಅಲ್ಲಿ ಎಡಗಡೆಗೆ ತಿರುಕ್ಕೊಂಡ್ರೆ ಒಂದು

ಕಾಂಪ್ಲೆಕ್ಸ್ ಬರುತ್ತೆ ಅದರಲ್ಲಿ ಕಂಪ್ಯೂಟರ್ ಕೇಂದ್ರ ಇದೆ. ಅದರ ಹೆಸರೂ ಹೀಗೇ ಇದೆ ಹೋಗಿ...'' ಎಂದವನೇ ಸೈಕಲ್ಲಿನವ ಭರ್ರನೆ ಮುಂದೆ ನಡೆದು ಮಾಯವಾದ.

ಪಂಡಿತ ಅವನು ಹೇಳಿದಂತೆ ಮತ್ತೆ ನಡೆದ. ಈಗ ಒಂದಿಷ್ಟು ಕೋಪ ಬಂದಿತು. ''ನಿನಗ್ಯಾರು ಈ ಹೆಣಭಾರದ ಹಲಸಿನಕಾಯಿ ಹೊತ್ತುಕೊಂಡು ಬರೋ ಬುದ್ಧಿ ಕೊಟ್ರು?'' ಎಂದು ತನ್ನನ್ನೇ ಬೈದುಕೊಂಡ. ಆದರೂ ಅಷ್ಟು ದೂರ ಹೋಗಿ ಎಡಕ್ಕೆ ತಿರುಗಿದರೆ ಅಲ್ಲೊಂದು ಕಾಂಪ್ಲೆಕ್ಸಿದೆ ಹಾಗೂ ಕಂಪ್ಯೂಟರ್ ಶಾಲೆಯೂ ಇದ್ದಹಾಗಿದೆ! ಫಲಕ ಹಾಕಿದ್ದಾರೆ.

ಖುಷಿಯಾಗಿ ಹತ್ತಿರ ಹೋದ, ಅದರ ಹೆಸರು ಟಿಕ್‌ಟಿಕ್‌ಸಾಫ್ಟ್! ಅಂದರೆ ಇದು ಪ್ರಭಾಕರ ಹೇಳಿದ್ದಲ್ಲ. ತಲೆ ದಿಮ್ಮನೆ ಸುತ್ತಿದಂತಾಯಿತು. ಎರಡು ಹಲಸುಗಳು ಈಗ ಬೆನ್ನನ್ನು ಗುದ್ದತೊಡಗಿದವು. ಕೈಕಾಲೆಲ್ಲ ಬಳಲಿ ಚಳಿಯಲ್ಲೂ ಬೆವರಿಳಿದು ಕಾಲುಗಳು ಮುಷ್ಕರ ಹೂಡುವ ಮುನ್ನೆಚ್ಚರಿಕೆ ನೀಡಿದುವು. ಒಂದಷ್ಟು ಕೂರದಿದ್ದರೆ ಖಂಡಿತ ಆ ಎಚ್ಚರಿಕೆ ನಿಜ ಆದೀತು ಎನಿಸಿದಾಗ ಅಲ್ಲೇ ಬದಿಯಲ್ಲಿದ್ದ ಕಲ್ಲಿನ ಮೇಲೆ ಕೂತ. ಬೆನ್ನಿಗೆ ಸೂಟುಕೇಸನ್ನೇ ಆಧಾರ ಆಗಿಸಿ ಒರಗಿದಾಗ ಒಂದಷ್ಟು 'ಹಾಯ್' ಅನ್ನಿಸಿತು. ರಾತ್ರಿ ಇಡಿ ಪ್ರಯಾಣ ನಿದ್ರಾರಹಿತವಾಗಿತ್ತು. ಕಣ್ಣುಗಳು ಭಾರ ಆದಂತೆ ಭಾಸವಾಯಿತು.

''ಏನಪ್ಪಾ...'' ಜೋರಾದ ಧ್ವನಿಗೆ ಬೆಚ್ಚಿ ತಲೆ ಎತ್ತಿ ನೋಡಿದ. ಎದುರಿನಲ್ಲಿ ದಪ್ಪನೆಯ ಒಬ್ಬಾಕೆ, ಅವಳ ಪಕ್ಕದಲ್ಲೊಂದು ಹತ್ತನ್ನೊಂದರ ಹುಡುಗ ನಿಂತಿದ್ದಾರೆ.



''ಏನಪ್ಪಾ ಮಾತೇ ಆಡಲ್ಲವಲ್ಲ... ಆವಾಗ್ನಿಂದ ಎರಡು ಸಲ ಕೇಳಿ ಆಯಿತು ಹಲಸಿನ ಹಣ್ಣು ಎಷ್ಟಕ್ಕೆ ಕೊಡ್ತೀಯಾ?'' ಅವಳು ಒಂದಷ್ಟು ಜೋರಾಗಿಯೇ ಕೇಳಿದಳು; ಆಗ ತಾನು ಎರಡೂ ಹಣ್ಣನ್ನು ಕಾಲ ಬುಡದಲ್ಲೇ ಇಟ್ಟುಕೊಂಡು ಕೂತಿರುವುದೂ, ಬೆನ್ನ ಹಿಂದಿರುವ ಸೂಟುಕೇಸು ಅವಳಿಗೆ ಕಾಣಿಸದೆ ಹೋಗಿರುವುದೂ, ಪ್ರಯಾಣದಲ್ಲಿ ಸರಿಯಾದದ್ದು ಎಂದುಕೊಂಡು ಕಂದುಬಣ್ಣದ ಒಂದಷ್ಟು ಹಳೆಯ ಪ್ಯಾಂಟು ಹಾಗೂ ಕಪ್ಪು ಸ್ವೆಟರು ಹಾಕಿಕೊಂಡು ತಲೆಗೆ ಮಫ್ಲರು ಸುತ್ತಿರುವುದೂ ಇದಕ್ಕೆಲ್ಲ ಕಾರಣ ಎಂದು ತಿಳಿಯಿತು!

ಮುಜುಗರಪಡುತ್ತ ಎದ್ದುನಿಂತು ತನ್ನ ಕಥೆಯನ್ನು ಹೇಳಿದ.

''ಹೌದೆ?... ಹಾಗಾದ್ರೆ ನೀವು ಹಣ್ಣು ಮಾರಲ್ವಾ?'' ಎಂದು ಅವಳು ಬೇಜಾರುಪಟ್ಟುಕೊಂಡರೂ ಇವನ ಕಷ್ಟಕ್ಕೊಂದಿಷ್ಟು ಅನುಕಂಪ ತೋರಿ, ''ನೀವು ಒಂದ್ ಕೆಲಸಾ ಮಾಡಿ... ಇಲ್ಲಿಂದ ಒಳಕ್ಕೆ ಒಂದು ಕಾಲುದಾರಿ ಹೋಗುತ್ತೆ ಅದು ಸೀದಾ ಮೂರ್ನೆ ಎಫ್ ಕ್ರಾಸು ಸೇರಿಕೊಳ್ಳುತ್ತೆ ಅಲ್ಲಿ ಒಂದಷ್ಟು ಸರಿಯಾಗಿ ವಿಚಾರಿಸಿ ಅಥವಾ ಫೋನಿದ್ರೆ ಮಾಡಿ ಅವರ ಮನೆಗೆ'' ಎಂದು ಮುಂದೆ ಹೋದಳು.

'ಈ ಫೋನಿನ ವಿಚಾರ ತನಗೆ ಮೊದಲೇ ಯಾಕೆ ಬರಲಿಲ್ಲ?' ಎಂದು ಬೈದುಕೊಳ್ಳುತ್ತಲೇ ಪಂಡಿತ ನಂಬರಿಗಾಗಿ ಡೈರಿ ಹುಡುಕಿದ. ಅದಿಲ್ಲ, ಅಂದರೆ ಅದನ್ನು ಊರಲ್ಲೇ ಮರೆತು ಬಂದದ್ದು ನೆನಪಾಯ್ತು. ಬಂದ ದಾರಿಗೆ ಸುಂಕ ಇಲ್ಲ ಅಂತಾರೆ. ಆದ್ದರಿಂದ ಕಾಲುದಾರಿ ಹಿಡಿದು ನಡೆದ. ಮೂರನೇ ಎಫ್ ಕ್ರಾಸು ಮತ್ತೆ ಬಂದೇ ಬಂತು. ಎಡಕ್ಕೆ ತಿರುಗಲೋ ಬಲಕ್ಕೋ? ಎಂದುಕೊಳ್ಳುವಾಗ ಈ ಮೊದಲು ಎಡಕ್ಕೆ ತಿರುಗಿದ್ದನ್ನು ನೆನಸಿಕೊಂಡು ಈಗ ಬಲಕ್ಕೆ ಹೊರಳಿ ನಡೆದ... ನಡೆದ... ಮತ್ತು ನಡೆದ.

ಏನೋ ಪರಿಚಿತ ಜಾಗ ಇದು ಅಂತ ಇದ್ದಕ್ಕಿದ್ದ ಹಾಗೆ ಭಾಸವಾಗಿ ಆಚೀಚೆ ನೋಡಿದ. ಅದು ತಾನು ಬಂದು ಇಳಿದಿದ್ದ ಬಸ್ ನಿಲ್ಲುವ ತಾಣ ಆಗಿತ್ತು! ಹಾಗಾದರೆ ಇದು ಬ್ಯಾಕ್ ಟು ಸ್ಕ್ವೇರ್ ಒನ್ ಕಥೆ ಆಯಿತು.... 'ಇನ್ನೇನು ಮಾಡುವುದು? ಸಿಟಿ ಬಸ್ ಹಿಡಿದು ಮೆಜೆಸ್ಟಿಕ್ ತಲುಪಿ ಮರಳಿ ಊರಿಗೆ ಹೋಗೋ ಬಸ್ ಹಿಡಿದರೆ ಹೇಗೆ...'' ಎಂದು ಒಂದು ಮನಸ್ಸು ದುಂಬಾಲು ಬಿದ್ದು ತಲೆ ಕೆರೆದುಕೊಳ್ಳುತ್ತಿರುವಾಗ ಹಿಂದಿನಿಂದ 'ಪಂಡಿತಾ... ಏ ಪಂಡಿತಾ...' ಎನ್ನುವ ಕೂಗು ಕೇಳಿಸಿ ಬಂತು.

ತಿರುಗಿ ನೋಡಿದರೆ ಪ್ರಭಾಕರ ನಿಂತಿದ್ದ! ಅಷ್ಟೇ ಅಲ್ಲ ''ಏನೋ ಇದು? ನಿನ್ನ ಬಸ್ಸು ಆರು ಗಂಟೆಗೇ ಬಂದಿದ್ರೂ ಮನೆಗೆ ಬರದೆ ಇಲ್ಲೇ ಏನು ಕಿತಾಪತಿ ನಡೆಸಿದ್ದೀಯ?'' ಎಂದು ಇವನಿಗೇ ಗುರ್ ಅಂದ!

''ನಂದು ಆಮೇಲಾಗಲಿ ನೀನು ಇಲ್ಲಿಗ್ಯಾಕೆ ಬಂದೆ ಹೇಳು?'' ಎಂದ ಇವನು.

''ರಮಾ ಬರ್ತಾ ಇದ್ದಾಳೆ ಎಂಟು ಗಂಟೆಯ ಬಸ್ಸಿಗೆ. ಅವಳನ್ನು ಕರ್ಕೊಂಡು ಹೋಗೋಕೆ ಬಂದೆ'' ಎಂದ ಪ್ರಭಾಕರ.

ಪಂಡಿತ ಪಕ ಪಕನೆ ನಕ್ಕ. ''ಯಾಕೆ?'' ಎಂದು ಕೇಳಿದ ಪ್ರಭಾಕರ.

''ಗೆಳೆಯ ಆಗಿ ಬರೋದಕ್ಕಿಂತ ಹೆಂಡತಿಯ ತಂಗಿ ಆಗಿ ಊರಿಂದ ಬಂದರೆ ಸುಖ ಜಾಸ್ತಿ ಅನ್ನಿಸಿತು ಅದಕ್ಕೆ...''

ಪ್ರಭಾಕರನಿಗೆ ನೆಟ್ಟಗೆ ಅರ್ಥ ಆಗಲಿಲ್ಲ ಆದರೂ ಇವನಿಗಿಂತ ಜೋರಾಗಿ ತಾನೂ ನಕ್ಕ!!

# ವಾಸ್ತು ಚಿಂತನೆ

– ಎಂ.ಎನ್.ಕೆ.

ಈಗ ಮನೆ ಕಟ್ಟಿಸೋರು ಮೊದಲು ಮಾಡೋ ಚಿಂತೆ ದುಡ್ಡಿನದಲ್ಲ. ಅದು ಹೇಗೋ ನಡೆಯುತ್ತೆ. ದೇವರಿದ್ದಾನೆ. ಆದರೆ ಅವರ ಮೊದಲ ಚಿಂತೆ ವಾಸ್ತು. ನಮ್ಮ ಮನೆ ವಾಸ್ತು ಪರೀಕ್ಷೇಲಿ ಪಾಸಾಗುತ್ತೋ ಇಲ್ವೋ ಅನ್ನೋದೇ ದೊಡ್ಡ ಚಿಂತೆ.

ವಾಸ್ತು ಮೇಲೆ ಬರೆದಿರುವ ಪುಸ್ತಕ ಕೊಂಡು ಓದೋದರಿಂದ ಹಿಡಿದು ವಾಸ್ತು ಕನ್ಸಲ್ಟೆಂಟ್ಸ್ ಹತ್ತಿರ ತಮ್ಮ ಮನೆ ಪ್ಲಾನ್ ಅಪ್ರೂ ಮಾಡಿಸಿಕೊಳ್ಳೋ ತನಕ ಈ ಚಿಂತೆ ಇದ್ದದ್ದೇ.

ನಮ್ಮ ಮನೆ ಪ್ಲಾನ್ ಬೆ.ನ.ಪಾ. ಹತ್ತಿರ ಪಾಸ್ ಮಾಡಿಕೋಬಹುದು. ಅದಕ್ಕೆ ಬೇಕಾದ್ದು ಕಾಂಚಾಣಾ. ಕಾಂಚಾಣಂ ಕಾರ್ಯಸಿದ್ಧಿ:

ಹಾಗೇ ''ಇಷ್ಟು ದೊಡ್ಡ ಮನೇ ಕಟ್ಟಲು ನಿಮಗೆ ದುಡ್ಡೆಲ್ಲಿಂದಾಬಂತು? Disclose your source of income' ಅಂತ IT ಡಿಪಾರ್ಟ್‌ಮೆಂಟ್‌ನೋರು ಕೊಡೊ ನೋಟೀಸ್ ನೂ ಸಮಾಧಾನ ಮಾಡಬಹುದು ಈ ಕಾಂಚಾಣದಿಂದ.

''ರೀ ಇದನ್ನ ಇಲ್ಲಿ ಕಟ್ಟಬೇಡಿ. ಈ ವಾಟರ್ ಟಾಂಕ್ ಇಲ್ಲ ಬೇಡವೇ ಬೇಡ. ಈ ಗೋಡೇ ಇಲ್ಲಿ ಬೇಡ'' ಒಂದೇ ಎರಡೇ ಈ ಸಲಹೆಗಳು. ಬಿಸೀ ತುಪ್ಪ ಉಗಳೋ ಹಾಗೂ ಇಲ್ಲ ನುಂಗೋ ಹಾಗೂ ಇಲ್ಲ.

''ಸಾರ್ ನನ್ನ ವೈಫ್ಗೂ. ಡಾಟರ್ಸ್ಗೂ ಈ ಕಿಚನ್ ಇಲ್ಲೇ ಬೇಕೂಂತ ಹಟ ಹಿಡಿದಿದ್ದಾರೆ. ಸ್ವಲ್ಪ ಅಡ್ಜಸ್ಟ್ ಮಾಡಿ ಸಾರ್'' ಅಂತ ಹಲ್ಲು ಕಿರಿದು ಸ್ವಲ್ಪ ಕರೆನ್ಸಿ ಮುಂದಿಟ್ಟರೆ ''ಹಾಗಾದ್ರೆ ಹೀಗೆ ಮಾಡಿ. ಈ ಗೋಡೇನಾ ಸ್ವಲ್ಪ ಎತ್ತರ ಮಾಡಿ. ವಾಸ್ತು ಆವಾಗ ಸರಿ ಆಗುತ್ತೆ'' ಅನ್ನೋ ರಿಲೀಫ್ ಸಿಗಬಹುದು.

''ಮನೇ ಕಟ್ಟಿ ನೋಡು, ಮದುವೆ ಮಾಡಿನೋಡು'' ಜೊತೆಗೆ ''ವಾಸ್ತು ಒಪ್ಪಿಸು ನೋಡೂ''ನೂ ಸೇರಿಸಬಹುದು.

ಈ ವಾಸ್ತು ಸರಿಯೊ ತಪ್ಪೋ ಅದು ಇಲ್ಲಿ ಬೇಕಾಗಿಲ್ಲ. ಅದನ್ನ ಹೇಳೋಕೇ ಇದಾರೆ ಎಕ್ಸ್‌ಪರ್ಟ್ಸ್. ನಮಗೆ ಇಲ್ಲಿ ಬೇಕಾಗಿರೋದು ವಾಸ್ತು ಮಾಡ ಹೊರಟವರ ಬವಣೆ ಮತ್ತು ಅದರ ಸ್ವಾರಸ್ಯಗಳು ಮಾತ್ರ.

೧. ಒಂದು ಭವ್ಯ ಬಂಗಲೆ ಎದ್ದು ನಿಂತಿದೆ. NRI ಕಟ್ಟಿದ್ದು. ಅಂದರೆ ಕೇಳಬೇಕೇ ಅದರ ವಿಸ್ತಾರ. ಅದರ ಗರಾಜ್ ನಲ್ಲೇ ಒಂದು ಸಾಧಾರಣ ಸೈಜ್

ಮದುವೆ ಮಾಡಬಹುದು. ಹಾಗಿತ್ತು. ಬಂದರು ನಮ್ಮ ವಾಸ್ತು ಗುರು. ''ಅಲ್ರೀ ಹೀಗೇಕ್ರೀ ಮಾಡಿದ್ರೀ ಈ ಗರಾಜ್. ಇಷ್ಟು ಇಳಿಜಾರಲ್ಲೇ ಕಟ್ಟೋದು. ನಿಮ್ಮ ಲೈಫ್ ಕೂಡಾ ಹೀಗೇ ಇಳಿಜಾರಲ್ಲೇ ಅಧೋಗತೀಗೆ ಇಳಿಯೋಲ್ವೇ? ಮೊದಲೇ ನನ್ನ ಕೇಳಬಾರದಿತ್ತೇನಪ್ಪಾ'' ಅಂದೇ ಬಿಟ್ರು. ಸರಿ ಆ ಗರಾಜ್ ನೆಲಸಮ ಆಗಿದೆ. ಆ ಜಾಗಾನ ಭರ್ತಿ ಮಾಡಿ ಎತ್ತರ ಮಾಡ್ತಿದ್ರೆ. ಆ ಗರಾಜ್‌ನಂತೆ ನಮ್ಮ ಲೈಫೂ ಉನ್ನತಿಗೇ ಹೋಗಬೇಡ್ವೇ?

Damage; ಕೇವಲ ೫ ಲಕ್ಷ. NRI ಅಲ್ವೆ? ಪರವಾಗಿಲ್ಲ ಬಿಡಿ.

೨. ಜಯನಗರದ ಹೋಟೆಲ್ ಒಂದರಲ್ಲಿ ದೋಸೇ ತಿಂದು, ಕಾಫೀ ಕುಡಿದು ಬಿಲ್ಗೆ wait ಮಾಡ್ತಾ ಕೂತಿದ್ದೆ. ಹಿಂದಿನ ಟೇಬಲ್ ಅಲ್ಲಿ ವಾಸ್ತು ಪರ ಮತ್ತು ವಿರೋಧ ನಡೀತಿತ್ತು ವಾದ. ಅಲ್ಲಿದ್ದೋರೆಲ್ಲ ಮಧ್ಯವಯಸ್ಕರು. ಒಬ್ಬ ಹೇಳ್ತಾ ಇದ್ದ ''ನೋಡ್ರಪ್ಪಾ. ನೀವೇನೋ ವಾಸ್ತೂನೂ ಇಲ್ಲ ಗೀಸ್ತೂನೂ ಇಲ್ಲಾಂತ ಹೇಳ್ತೋದು. ನನ್ನ ಸ್ನೇಹಿತ... ಜಾಗದಲ್ಲಿ ಪೆಟ್ರೋಲ್ ಬಂಕ್ ಇಟ್ಟಿದ್ದಾನೆ. ವ್ಯಾಪಾರ ಇಲ್ಲದೆ ನೊಣಾ ಹೊಡೀತಿದ್ದ. ಒಬ್ಬ ವಾಸ್ತು ಎಕ್ಸ್ ಪರ್ಟ್ ಬಂದು ಜಾಗಾನಾ ಇನ್ಸ್‌ಪೆಕ್ಟ್ ಮಾಡಿ ''ಇಲ್ಲಿ ಎರಡು ಲೋಡ್ ಇಟ್ಟಿಗೆ ತರಿಸಿ ಗೋಡೇ ಥರ ಜೋಡಿಸಿ. ವ್ಯಾಪಾರ ಚಿಗುರುತ್ತೆ'' ಅಂತ ಹೇಳಿ ತನ್ನ ಫೀಸ್ ವಸೂಲ್ ಮಾಡಿ ಹೊರಟು ಹೋದ. ಅವನು ಹೇಳಿದ ಹಾಗೇ ಮಾಡ್ದಾ ನನ್ನ ಫ್ರೆಂಡ್. ಈಗ ಬಂದು ನೋಡಿ ಅಲ್ಲಿ. ಅರ್ಧ ಲೀಟರ್ ಪೆಟ್ರೋಲ್ಗೆ ಅರ್ಧ ಘಂಟೆ ಕಾಯಬೇಕು. ಹಾಗಿದೆ ಗಿರಾಕಿ, ಗಿಜಿ ಗಿಜೀಂತ'' ಅಂದ. ಪರವಾಗಿಲ್ಲೇ ವಾಸ್ತು ದೇವತೇನ ಇಷ್ಟು ಚೀಪಾಗಿ ಫೂಲ್ ಅಲ್ಲಾ ಅಲ್ಲಾ (ಶಾಂತಂ ಪಾಪಂ, ಶಾಂತಂ ಪಾಪಂ) ಸಮಾಧಾನಾ ಮಾಡಬಹುದಾಂತ ಸಂತೋಷ ಆಯಿತು. ಆದರೆ ಆ ಕನ್ಸಲ್‌ಟೆಂಟ್ ಫೀ ಈ ಎರಡು ಲೋಡ್ ಇಟ್ಟಿಗೇಗಿಂತ ಜಾಸ್ತೀ ಆಯಿತಲ್ಲಾ. ಮೂಗಿಗಿಂತ ಮೂಗುತಿ ಭಾರಾ ಅಂತಾರಲ್ಲಾ ಹಾಗೇ.

೩. ಇನ್ನೊಬ್ಬರ ಮನೆ. ಮುಂಬಾಗಿಲು ಕೆತ್ತನೆಯ ಕೆಲಸದಲ್ಲಿ ಮಾಡಿದ್ದು. ಒಳ್ಳೇ ತೇಗದ ಮರ. ರಾಜಾಸ್ತಾನೀ carpenters ಕರಿಸಿ ಮಾಡಿಸಿದ್ದರು. ಆರೂವರೆ ಅಡಿ ಇತ್ತು ಎತ್ತರ. ಬಂದರು ವಾಸ್ತು ಶಿಲ್ಪಿ. ''ಮೊದಲು ಈ ಬಾಗಿಲಿನ ಎತ್ತರ ಕಡಿಮೇ ಮಾಡಿ. ಇಲ್ಲದಿದ್ದರೆ ರಾಕ್ಷಸರು ಬರ್ತಾರೆ ಒಳಗೆ. ಬಾಗಿಲು ಚಿಕ್ಕದಾಗಿದ್ದರೆ ಅವರಿಗೆ ಬರಕ್ಕಾಗಲ್ಲ. ಕಾರಣ ರಾಕ್ಷಸರಿಗೆ ಬಗ್ಗಿ ನಡೆಯುವ ಅಭ್ಯಾಸ ಇಲ್ಲ'' ಅಂದರು. ಮನೆಯವರಿಗೆ ಆ ಕೆತ್ತನೆ ಬಾಗಿಲು ತೆಗೆಯಲು ಮನಸ್ಸಿಲ್ಲಾ. ಅದಕ್ಕೆ ಆ expert ಗೇ ದಂಬಾಲು ಬಿದ್ದರು, ಪರಿಹಾರ ಸೂಚಿಸಲು. ಅದಕ್ಕೆ ಪರಿಹಾರ ಐದೂ ಮುಕ್ಕಾಲು ಅಡಿ ಎತ್ತರಕ್ಕೆ ಆ ಬಾಗಿಲಿಗೆ ಒಂದು ಮರದ ಪಟ್ಟೀ ಬಡಿಯೋದು. ಒಂದು ಸುಂದರವಾದ ಕೆತ್ತನೆಯ ಪಟ್ಟಿ ತಂದು ಅಲ್ಲಿ ಬಡಿದದ್ದೂ ಆಯಿತು. ರಾಕ್ಷಸರು ಹೊರಗೇ ನಿಂತರು ಸಿಡಿಮಿಡಿಗೊಳ್ಳುತ್ತ.

ಸುಪ್ರೀತರಾದ ಪ್ರಸನ್ನ ದೇವತೆಗಳು ಆ ಪಟ್ಟಿ ಕೆಳಗೆ ನುಸುಳಿಕೊಂಡು ಒಳಗೆ ಬಂದರು.

ಆದರೆ ಕಥೆ ಇಲ್ಲಿಗೇ ಮುಗೀಲಿಲ್ಲ. ಆ ಮನೆಯವರ Nephew ಆರಡಿ ಎರಡಿಂಚಿನ ಆಜಾನು ಬಾಹೂ ಬಂದ. ಆ ಪಟ್ಟಿ ಗಮನಿಸದೆ ಹಣೆಗೆ ಬಡಿಯಿತು. ಬೋರು ಉಬ್ಬಿತು. ಮನೆಯವರು ICE ತಂದು ಹಣೇ ಮೇಲಿಟ್ಟು ಊತಾ ಕಮ್ಮೀ ಮಾಡಿದರು. ಅವನಿಗೆ ಆ ಪಟ್ಟಿ ಅಲ್ಲಿ ಹೇಗೆ ಬಂತೂ ಅಂತಾನೂ ವಿವರಿಸಿದರು.

ಆ ಯಂಗ್ ಮಾನ್ ತನ್ನ ನೋವನ್ನು ತಡೆದುಕೊಂಡು ತನ್ನ ಸಲಹೆಯನ್ನು ಮುಂದಿಟ್ಟ:

''ಇಲ್ಲಿ ಸದಾ ಒಂದು ICE BOX ಇಟ್ಟುಬಿಡಿ. ಹಣೆ ಹೊಡೆದುಕೊಂಡವರಿಗೆ ಕೂಡಲೇ First Aid ಕೊಡಬಹುದು. ಆದರೆ ಆ First Aid Box ಎಲ್ಲಿಡಬೇಕು, ಅದರ ಮುಚ್ಚಳ ಯಾವ ದಿಕ್ಕನ್ನು ಫೇಸ್ ಮಾಡಬೇಕು ಇದನ್ನೆಲ್ಲಾ ಆ ನಿಮ್ಮ ವಾಸ್ತು ಕನ್ಸಲ್ಟೆಂಟ್ನೇ ಕೇಳಿ''

What a fine compromise between beliefs and reality! ಶಹಭ್ಬಾಶ್ ಯಂಗ್ ಮಾನ್ ಅಂದುಕೊಂಡೆ ಮನಸ್ಸಿನಲ್ಲೇ.

ಆ Episode ಕೇಳಿದ ಮೇಲೆ ನಾನು ಅಂದ್ಕೊಂಡೆ ''ಎಲಾ ಎಲಾ ಆ ರಾಕ್ಷಸರನ್ನ ಹೊರಗಿಡಲು ಇಷ್ಟೆಲ್ಲಾ ಕಷ್ಟವೇ?'' ಸ್ವಲ್ಪ ಪ್ರಯತ್ನ ಮಾಡಿ, ಬ್ರಾಂಹೀ ಮುಹೂರ್ತದಲ್ಲಿ ಎದ್ದು, ಸ್ನಾನಾ ಮಾಡಿ

''ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಾಕ್ಷಸಾಂ||

ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಕ್ಷಣಂ||''

ಅಂತ ದೊಡ್ಡ ಕಂಚಿನ ಗಂಟೆ ಬಾರಿಸಿದರೆ ಸಾಲದೇ? ಹೀಗೆ ಪ್ರಾಬ್ಲಂನ ಸಿಂಪ್ಲಿಫೈ ಮಾಡಬಹುದಾಗಿತ್ತಲ್ಲಾಂತ. ಆದರೆ ನಮಗೆ ಸಿಂಪಲ್ ಸಲ್ಯೂಶನ್ಸ್ ಬೇಡವಲ್ಲಾ. ಬೆಳಗ್ಗೆ ೪.೩೦ಕ್ಕೆ ಬ್ರಾಂಹೀ ಮುಹೂರ್ತದಲ್ಲಿ ಏಳೋಕೇ ಯಾರಿಂದ ಸಾಧ್ಯ?

ಬೆಡ್ ಕಾಫೀ ಇಲ್ಲದೆ ಸ್ನಾನಾ ಹೇಗೆ ಸಾಧ್ಯ?

★★★

## ಥಳುಕು - ತುಣುಕು

''ನಿಮ್ಮೂರಲ್ಲಿ ಮಳೆಬೆಳೆ ಹೇಗಾಯ್ತು ಗೌಡರೇ!...''

''ತಿಳೀದೂ ಸ್ವಾಮಿ. ಇನ್ನೂ ಪೇಪರ್ನ ಓದಿಲ್ಲ...''

ವಿಂಟೇಜ್ ಕೊರವಂಜಿ




"ನಿನ್ನದೃಷ್ಟ ನಾನೇನ್ಮಾಡ್ಲಿ. ಯಾಕೋ ಇವತ್ತು ಮುಚ್ಚಿದಾರಂತೆ...."

# ರಾಜಣ್ಣ

**- ಪಡುಕೋಣೆ ಪ್ರಭಾಶಂಕರ**

ನಾವೆಲ್ಲ ಅವರನ್ನು ''ರಾಜಣ್ಣ'' ಎಂದು ಕರೆಯುತ್ತಿದ್ದೆವು. ಪುತ್ತೂರಿನ ದಸರಾ ಉತ್ಸವದ ಅತಿಥಿಯಾಗಿ ೧೯೩೦-೩೧ರ ಸಮಯದಲ್ಲಿ ಬಂದು, ತಮ್ಮ ''ಯೆಂಡ್ಕುಡ್ಕ ರತ್ನ''ನನ್ನು ನಮಗೆ ಪರಿಚಯಿಸಿದ ರಾಜರತ್ನಂ ನಮ್ಮನ್ನೆಲ್ಲಾ ಮಂತ್ರಮುಗ್ಧರನ್ನಾಗಿ ಮಾಡಿದರು. ಬಹುಬೇಗ ನಮ್ಮ ಆತ್ಮೀಯ ಅಣ್ಣನಂತಾದರು. ಮುಂದೆ ೧೯೩೬ ರಲ್ಲಿ ಅದರ ಆಸಕ್ತಿ ಪಾಳಿಭಾಷೆ, ಬೌದ್ಧ ಸಾಹಿತ್ಯಗಳ ದಿಸೆಯಲ್ಲಿ ತೆರಳಿ, ಅವರು ಬೌದ್ಧ ಮತಕ್ಕೆ ಸಂಬಂಧಿಸಿದ ತಮ್ಮ ಕನ್ನಡ ಬರಹಗಳನ್ನು ಮಂಗಳೂರಿನ ಮುದ್ರಾಣಾಲಯ ಒಂದರಲ್ಲಿ ಮುದ್ರಿಸಲು ಆ ಊರಲ್ಲಿ ನೆಲಸಿದ್ದು, ನಮ್ಮ ಮನೆಯಲ್ಲೇ ಇರಲು ಬಂದಾಗ, ಬಾಲ್ಯಾವಸ್ಥೆಯಲ್ಲಿದ್ದ ನನ್ನ ಅಕ್ಕತಂಗಿಯರಿಗೂ ನನಗೂ ''ರಾಜಣ್ಣ''ನಾದರು.

ಇಂದು ನನಗೆ ನೆನಪಿನ ಚಿತ್ರದಲ್ಲಿ ಕಾಣುವುದು ಅಂದಿನ ಅವರ ಅಧ್ಯಯನದ ಕೊಠಡಿ, ಮೇಜಿನ ಮೇಲೆ ಹರಡಿದ ಅನೇಕ ಗ್ರಂಥಗಳು, ತಮ್ಮ ಬರಹದ ಕೆಲಸದಲ್ಲಿ ಮಗ್ನರಾದ ರಾಜಣ್ಣ, ವಿದ್ಯುಚ್ಛಕ್ತಿ ಇಲ್ಲದ ಆ ಊರಲ್ಲಿ, ''ಮೂನ್ ಲ್ಯಾಟ್ ಗ್ಲೋಬ್'' ಎಂದು ಕರೆಯಲ್ಪಡುವ ಬಿಳಿ ಗಾಜಿನ ಗೋಲಕದ 'ಟೋಪಿ' ಧರಿಸಿದ ಸೀಮೆ ಎಣ್ಣೆಯ ದೀಪದ ಪ್ರಕಾಶದಲ್ಲಿ ರಾತ್ರಿ ಹೊತ್ತು, ಮಧ್ಯರಾತ್ರಿಯ ಅನಂತರವೂ ಅವರು ಕರಡು ಪ್ರತಿಗಳನ್ನು ತಿದ್ದುವ, ಹೊಸ ಬರಹಗಳನ್ನು ಮುದ್ರಣಕ್ಕೆ ಅಳವಡಿಸುವ ಕೆಲಸಗಳಲ್ಲಿ ತತ್ಪರರಾಗಿರುತ್ತಿದ್ದರು.

ಬೆಳಿಗ್ಗೆ ಮನೆಬಿಟ್ಟು ಹೊರಟರೆ ದಿನವೆಲ್ಲಾ ಅವರು ಮುದ್ರಣಾಲಯದಲ್ಲೇ ಕಳೆಯುತ್ತಿದ್ದರು. ಮಧ್ಯಾಹ್ನದ ಊಟಕ್ಕೂ ಹಲವಾರು ಬಾರಿ ಬರುತ್ತಿದ್ದಿಲ್ಲ. ನಮ್ಮ ತಾಯಿ ಅನೇಕ ಸಲ ಅವರನ್ನು ''ಊಟ, ತಿಂಡಿಗಳ ಕಡೆ ಸ್ವಲ್ಪ ಗಮನ ಕೊಡಪ್ಪಾ - ಸುಮ್ಮನೆ ದೇಹದಂಡನೆ ಮಾಡಬೇಡ'' ಎಂದು ಬೋಧಿಸುತ್ತಿದ್ದರು. ಆದರೂ ''ಕಾಯಕವೇ ಕೈಲಾಸ'' ಎಂದು ನಂಬಿದ ರಾಜಣ್ಣ ಅವರ ಮಾತನ್ನು ಆಲಿಸಿ, ಮುಗುಳ್ನಗೆ ನಕ್ಕು, ಏನೂ ಅನ್ನದೆ ಪುನಃ ತಮ್ಮ ಕೆಲಸದಲ್ಲಿ ತೊಡಗುತ್ತಿದ್ದರು.

ಒಂದಿಷ್ಟು ಬಿಡುವು ದೊರಕಿದ್ದಾಗ ನಮ್ಮನ್ನು ಪ್ರೀತಿಯಿಂದ ಮಾತನಾಡಿಸಿ, ತಮ್ಮ ಚುಟಕಗಳನ್ನು ಕಲಿಸಿ ಮನರಂಜಿಸುತ್ತಿದ್ದರು. ಅವರ 'ಯೆಂಡ್ಕುಡ್ಕ ರತ್ನ' ಹಾಡುಗಳಲ್ಲಿ ಬರುವ ವಿಸ್ಮಯಕಾರಿ ಉಪಮೆಗಳು ನಮಗೆ ತುಂಬಾ ಇಷ್ಟವಾಗಿದ್ದವು. ''ತಿಥಿ ಮಾಡ್ಸೋರ್ಗೆ ಏನು ಗೊತ್ತೈತೆ ಚೆಡ್ಡಿ ಒಲಿಯೋ ಕೆಲ್ಸ'' ''ಹಾವಿಗ್ ಮುತ್ತ್ ಇಕ್ಕೋದು, ಹುಲಿಗ್‌ಹಲ್ ತಿಕ್ಕೋದು'' ಇತ್ಯಾದಿ ಸ್ವಾರಸ್ಯದ

ಪಂಕ್ತಿಗಳನ್ನು ಜೋರಾಗಿ ಹೇಳುತ್ತಾ ಮನೆಯೊಳಗೆಲ್ಲಾ ಓಡಾಡುತ್ತಿದ್ದೆವು. ಅಪರೂಪಕ್ಕೆ ಬಿಡುವು ಮಾಡಿಕೊಂಡು ಅವರು ನಮ್ಮನ್ನು ಸರ್ಕಸ್ಸು ಸಿನೆಮಾಗಳಿಗೆ ಕರಕೊಂಡು ಹೋದಾಗ ನಮಗೆ ಎಲ್ಲಿಲ್ಲದ ಗೆಲುವು. ಸರ್ಕಸ್ಸಿನವರು ''ವಿದ್ಯಾರ್ಥಿಗಳಿಗೆ ಅರ್ಧ ಛಾರ್ಜು'' ಎಂದು ಘೋಷಿಸಿದ್ದರು. ನಮಗೆಲ್ಲಾ ಅರ್ಧಛಾರ್ಜಿನ ಟಿಕೆಟ್ಟುಗಳನ್ನು ಖರೀದಿಸಿದ ಬಳಿಕ ಅವರು ತಾನೂ ವಿದ್ಯಾರ್ಥಿ - ಬೌದ್ಧ ಸಾಹಿತ್ಯ, ಪಾಳೀ ಭಾಷೆಯ ವಿದ್ಯಾರ್ಥಿ'' ಎಂದು ಸರ್ಕಸ್ಸಿನ ಮ್ಯಾನೇಜರನ್ನು ಪುಸಲಾಯಿಸಿ ತಮಗೂ ಅರ್ಧ ಟಿಕೆಟ್ಟನ್ನು ಗಿಟ್ಟಿಸಿಕೊಂಡ ಅವರ ದಿಟ್ಟತನ ಕಂಡು ಬೆರಗಾಗಿದ್ದೆವು!

ನನಗೆ ಅದೇ ವರುಷದ ಬೇಸಿಗೆ ರಜೆಯಲ್ಲಿ ಉಪನಯನವಾಯಿತು. ಉಡುಗೊರೆಯಾಗಿ ಅವರು ನನಗೆ ನನ್ನ ಸರಿ ಅಳತೆಯ ಸಿಲ್ಕಿನ ಶರಟನ್ನು ಕೊಟ್ಟಾಗ, ''ಅರೇ ಹುಡುಗನನ್ನು ದರ್ಜಿಯ ಬಳಿ ಕೊಂಡು ಹೋಗದೆ ಇವರು ಇಷ್ಟು ಅಚ್ಚುಕಟ್ಟಾಗಿ ಹೊಲಿಸಿದ ಶರ್ಟನ್ನು ಎಲ್ಲಿ ಪಡಕೊಂಡರು?'' ಎಂದು ನಮ್ಮ ತಾಯಿಗೆ ಆಶ್ಚರ್ಯವೂ ಸಂಶಯವೂ ಬಂದು ಅವರನ್ನೇ ನೇರವಾಗಿ ಕೇಳಿದಾಗ, ರಾಜಣ್ಣ ನನ್ನ ಅಳತೆಗೆ ಎಂದು ಉಪಾಯವಾಗಿ 'ಕದ್ದಿದ್ದ' ನನ್ನದೇ ಹಳೇ ಶರಟನ್ನು ಮಾತಿಲ್ಲದೆ ನಮ್ಮ ತಾಯಿಯ ಕೈಯಲ್ಲಿಟ್ಟರು!

ಅವರು ನಮ್ಮಲ್ಲಿದ್ದಾಗಲೇ ಕೆಲಸದ ಒತ್ತಡದಲ್ಲಿ ಅನ್ನನಿದ್ರೆಗಳನ್ನು ತೊರೆದುದರ ಪರಿಣಾಮವಾಗಿ ವಿಪರೀತ ಜ್ವರದಿಂದ ಹಾಸಿಗೆ ಹಿಡಿದರು. ಜ್ವರ ಏರಿದಾಗ ಪಾಳಿ ಭಾಷೆಯ ವಾಕ್ಯಗಳನ್ನು ಬಡಬಡಿಸುತ್ತಿದ್ದರು. ಔಷಧೋಪಚಾರದಿಂದ ಗುಣಸಿಗದಿದ್ದಾಗ ಭೀತಿಪಟ್ಟ ನಮ್ಮ ತಂದೆ, ಮಿತ್ರರಾದ ಪ್ರೊ. ಕೆ.ವಿ. ಅಯ್ಯರ್ ಅವರನ್ನು ಬೆಂಗಳೂರಿಗೆ ತಂತಿ ಕೊಟ್ಟು ಬರಮಾಡಿಸಿದರು. ಅಯ್ಯರ್ ಅವರ ಶುಶ್ರೂಷೆ, ಸಲಹೆ, ಸಾಮಿಪ್ಯದ ಫಲವಾಗಿ ರಾಜಣ್ಣನವರು ಬೇಗನೆ ಗುಣಮುಖವಾಗಿ ಶ್ರೀ ಅಯ್ಯರ್ ಅವರ ಸಲಹೆಯಂತೆ ಅವರೊಡನೆ ಬೆಂಗಳೂರಿಗೆ ಮರಳಿದರು.

''ಮುದ್ದಿನ ಹೆಂಡತಿ, ಮಗನನ್ನು ತೊರೆದು ಬೋಧಿಯನ್ನು ಅರಸಿ ಕಾಡಿಗೆ ತೆರಳಿದ ಸಿದ್ಧಾರ್ಥನಂತೆ, ರಾಜಣ್ಣನು ನಮ್ಮಲ್ಲಿ ಬಂದಿದ್ದಾನೆ'' ಎಂದು ನಮ್ಮ ತಾಯಿ ಅವರನ್ನು ತಮಾಷೆ ಮಾಡುತ್ತಿದ್ದರು.

ರಾಜಣ್ಣ ನಮ್ಮಲ್ಲಿ ಇದ್ದಷ್ಟು ದಿನವೂ ನಮಗೊಬ್ಬ ಹೊಸ ಅಣ್ಣನು ದೊರಕಿದ ಗೆಲವು ನಮಗೆಲ್ಲಾ, ಈಗ ಅದೊಂದು ಸಿಹಿಯ ನೆನಪಾಗಿ ಅಷ್ಟೇ ಉಳಿದಿದೆ.



# ನೀವೆಷ್ಟು ಜಾಣರು?

– ಆನಂದ



ಉದ್ದಾನೆ ಮನುಷ್ಯರು ದುಂದು ವೆಚ್ಚ ಮಾಡುತ್ತಾರೆ ಏಕೆ?

- ಏಕೆಂದರೆ ಅವರು ಹಾಸಿಗೆ ಇದ್ದಷ್ಟು ಕಾಲು ಚಾಚುವದಿಲ್ಲ ಅದಕ್ಕೆ

ಈ ಮನೆಯ ಮುಂದಿರುವ ನಾಯಿ ಒಳಗೆ ಯಾವಾಗ ಹೋಗುತ್ತದೆ ಹೇಳುವಿರಾ?

- ಮನೆಯ ಬಾಗಿಲು ತೆಗೆದಾಗ!

ಈ ವ್ಯಕ್ತಿಯ ತಲೆಯೇಕೆ ಬೊಕ್ಕಾಗಿದೆ?

- ಸಿಂಪಲ್. ಕೂದಲು ಉದುರಿರುವದರಿಂದ



ನಂದಿ ಬೆಟ್ಟದಲ್ಲಿರುವ ಮಾನಸ ಸರೋವರದ ಕೊರೆಯುವ ನೀರಿನಲ್ಲಿ ನಿಮ್ಮ ನೀಲಿ ಸ್ವೆಟರ್ ಅದ್ದಿದರೆ ಏನಾಗುತ್ತದೆ?

- ಒದ್ದೆ. ನಿಮಗೆ ಇನ್ನಷ್ಟು ಚಳಿ

ಹಾಲಿನಲ್ಲಿರುವ ಐದು ವಸ್ತುಗಳಾವುವು?

- ಬೆಣ್ಣೆ, ಮಜ್ಜಿಗೆ, ನೀರು, ಬಿಳಿ ಬಣ್ಣ ಮತ್ತು ಹುಲ್ಲು

ಐದು ಬಾಳೆ ಹಣ್ಣನ್ನು ಆರು ಜನರಿಗೆ ಹಂಚುವುದು ಹೇಗೆ?

- ಸೀಕರಣೆ ಮಾಡಿ ದೊನ್ನೆಯಲ್ಲಿ ಹಾಕಿ ಹಂಚಿದರಾಯಿತು

ಕೆಲವೊಮ್ಮೆ ತಲೆಯಲ್ಲಿರದ, ಇರುವ ವಸ್ತು ಯಾವುದು?

- ಕೂದಲು/ಟೋಪಿ (ಆಯ್ಕೆ ನಿಮ್ಮದು)

ಮಳೆ ಏಕೆ ಬರುತ್ತದೆ?

- ಛತ್ರಿ ಅಂಗಡಿಗಳಿಗೆ ವ್ಯಾಪಾರವಾಗಲೆಂದು



ಮರದ ಮೇಲಿರುವ ಒಂದು ಗೂಬೆಗಿಂತಲೂ ಇನ್ನಷ್ಟು ಭಯಂಕರವಾಗಿ ಧ್ವನಿ ಮಾಡುವುದು ಯಾವುದು?

- ಎರಡು ಗೂಬೆಗಳು

ಈ ಚಿತ್ರವನ್ನು ಸೂಕ್ಷ್ಮವಾಗಿ ಗಮನಿಸಿ. ಈ ವ್ಯಕ್ತಿ ಬೆಲ್ಟ್ ಏಕೆ ಹಾಕಿಕೊಂಡಿದ್ದಾನೆ ಹೇಳಬಲ್ಲಿರಾ?

- ಪ್ಯಾಂಟ್ ಹಿಡಿದಿಡಲು.

ಅಡಿಗೆಯವರು ಕೆಟ್ಟವರಾಗಿ ಯಾವಾಗ ಆಗುತ್ತಾರೆ?

- ಹೊಟ್ಟೆ ತುಂಬಿದವರಿಗೆ ಬಡಿಸಿದಾಗ.

ಇತರ ಯಾವ ಪ್ರಾಣಿಗಿಲ್ಲದ್ದು ಈ ಹಸುವಿಗಿದೆ ಏನದು?

- ಕರು



ಮನೆಗಿಂತ ಎತ್ತರವಾಗಿ ಹಾರಬಲ್ಲ ಪ್ರಾಣಿ ಯಾವುದು?

- ಆದರೆ ಮನೆ ಹಾರಬಲ್ಲದೆ?

ಇದು ಜೇಬಿನಲ್ಲಿದ್ದಾಗ ಬೆರಳು ಹಾಕಿದಷ್ಟೂ ದೊಡ್ಡದಾಗುತ್ತದೆ ಏನದು?

- ತೂತು

ಇದಕ್ಕೆ ತಲೆ ಬೇಕಾಗಿದ್ದರೂ ಅದು ತಲೆಯಲ್ಲ ಏನದು?

ಟೋಫನ್

ಎಷ್ಟು ದೊಡ್ಡ ದಾರದ ಉಂಡೆಗಳು ಇದ್ದರೆ ಚಂದ್ರನನ್ನು ಮುಟ್ಟಬಹುದು?

- ಒಂದೇ ಸಾಕು. ಆದರೆ ಭಾ......ರಿ.

ಸರಿಯುತ್ತರಗಳು:

ಇದಕ್ಕಿಂತಲೂ ಹೆಚ್ಚು ಸ್ವಾರಸ್ಯಕರ ಉತ್ತರಗಳನ್ನು ನೀಡಿದರೆ ನೀವು ಇನ್ನಷ್ಟು ಜಾಣರು.

(ಸೋವಿಯತ್ ಪಬ್ಲಿಕೇಷನ್ ವಾಸನೆ ಬರುತ್ತಿದೆಯೆ? ಆದರೆ ಹಿಡಿಯಲು ಈಗ ಕೆ.ಜಿ.ಬಿ. ಇಲ್ಲ!)

## ಅಪರಂಜಿಯ ಕರೆಗೆ ಓಗೊಟ್ಟು ಜಾಹಿರಾತುಗಳನ್ನು ನೀಡಿ ಸಹಕರಿಸಿದ ಕೆಳಗಿನ ಎಲ್ಲ ಮಹನೀಯರಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು

| ಕ್ರಮ ಸಂಖ್ಯೆ | ಜಾಹೀರಾತು | ಪುಟ |
|---|---|---|
| 1. | ಹೆಚ್.ಎಂ.ಟಿ. | ಹೊರ ಹೊದಿಕೆ |
| 2. | ಪೂರ್ಣಿಮಾ ಗೌಡ | ಒಳ ಹೊದಿಕೆ |
| 3. | ವಿಜಯ ಮತ್ತು ಆನಂದ್ ದೇಸಾಯ್ | ಒಳ ಹೊದಿಕೆ |
| 4. | ಡಾ|| ಸುಧೀಂದ್ರ | 15 |
| 5. | ಪ್ರವೀಣ್ ಮೆಟಲ್ | 15 |
| 6. | ನಟರಾಜ್ ಮೆಟಲ್ ಸ್ಟೋರ್ಸ್ | 16 |
| 7. | ನವೀನ್ ರಬ್ಬರ್ಸ್ | 16 |
| 8. | ವಿಜಯಶ್ರೀ ಇಂಜಿನಿಯರಿಂಗ್ ವರ್ಕ್ಸ್ | 24 |
| 9. | ಬೊರೂಖ | 24 |
| 10. | ಶೇಟ್ ಎಲೆಕ್ಟ್ರಿಕಲ್ಸ್ | 33 |
| 11. | ಬೆನರ್ಝೀರ್ ಟೆಕ್ಸ್‌ಟೈಲ್ಸ್ | 34 |
| 12. | ತೇಜಸ್ | 48 |
| 13. | ಭೂಪಾಲಂ ಎಲೆಕ್ಟ್ರಾನಿಕ್ಸ್ | 53 |
| 14. | ಭೂಪಾಲಂ ಎಂಟರ್‌ಪ್ರೈಸ್ | 54 |
| 15. | ಮಕರಂ ಎಂಟರ್‌ಪ್ರೈಸ್ | 62 |
| 16. | ವರ್ಲ್ಡ್ ಸ್ಪೇಸ್ | 67 |
| 17. | ಶ್ರೀ ಕ್ಷೇತ್ರಪಾಲಯ್ಯ | 68 |
| 18. | ವೆಲ್ ವಿಷರ್ಸ್ | 85 |
| 19. | ಮೈಕೊ | 86 |
| 20. | ಫೈನ್ ಕ್ರಾಫ್ಟ್ಸ್ | 98 |
| 21. | ರವಿ ಗ್ರಾಫಿಕ್ಸ್ | 103 |
| 22. | ವೆಲ್‌ವಿಷರ್ | 104 |
| 23. | ವಿಜಯ್ ಸ್ಫೆರಾಯಿಡಲ್ಸ್ | 114 |
| 24. | ಎಸ್.ವಿ. ಸ್ವಾಮಿ | 120 |
| 25. | ಎಸ್.ವಿ. ಆರ್. ಏಜನ್ಸೀಸ್ | 124 |
| 26. | ಎಸ್.ವಿ. ರಂಗಸ್ವಾಮಿ | 132 |
| 27. | ಜಿ.ಎಸ್. ಅಸೋಸಿಯೇಟ್ಸ್ | 137 |
| 28. | ಎಸ್.ಬಿ. ಎಂ. | 138 |
| 29. | ಮೈಸೂರು ಕನ್‌ಸ್ಟ್ರಕ್ಷನ್ ಕಂಪನಿ | 144 |
| 30. | ಜಿ.ಜಿ. ಟ್ರಾನಿಕ್ಸ್ | 150 |

# ನಾಳೆ - ಇಂದು - ನಿನ್ನೆ

- ಗೌತಮ

ಪ್ರತಿಯೊಬ್ಬನ ಜೀವಿತಾವಧಿಯಲ್ಲಿಯೂ ನಡೆಯುವ ಪ್ರತಿಯೊಂದು ಘಟನೆಯೂ ಒಂದೊಂದೇ ಸಲ ಘಟಿಸುವಂಥದ್ದು. ಹೌದೆನ್ನುವವರು ಮುಂದಿನ ಪ್ಯಾರಾ ಓದದಿದ್ದರೂ ನಡೆಯುತ್ತೆ ಅಲ್ಲವೆನ್ನುವವರು ಮುಂದೆ ಓದಿ.

ಎಸ್ಸೆಸ್ಸೆಲ್ಸಿಯಲ್ಲಿ ಹನ್ನೆರಡು ಸಲ ಫೇಲಾದರೆ? ಅಂತೀರಾ? ನಿಜ. ಮೊದಲನೆ ಸಲ ಫೇಲಾಗೋದು ಒಂದೇ ಸಲ. ಏಳನೇ ಸಲ ಫೇಲಾಗೋದೂ ಒಂದೇ ಸಲ. ಹನ್ನೆರಡನೇ ಸಲ ಫೇಲಾಗೋದೂ ಒಂದೇ ಸಲ. ಈಗಲಾದರೂ ಹೌದೆನ್ನುವಿರಾ?

ಹೀಗಿರೋವಾಗ ವಿಶ್ವದಾದ್ಯಂತ ಕುತೂಹಲ ಎಬ್ಬಿಸಿರುವ ಉಲ್ಕಾಪಾತದ್ದೇನು ದೊಡ್ಡಸ್ತಿಕೆ ಆದರೂ ''ನೋಡಲು ಮರೆಯದಿರಿ, ಮರೆತು ನಿರಾಶರಾಗದಿರಿ'' ಅನ್ನೋ ಸ್ಲೋಗನ್ ''ನೋಡಿಬಿಡಬೇಕಪ್ಪ'' ಅಂತಂದುಕೊಳ್ಳುವಂತೆ ಮಾಡಿತು.

ಒಬ್ಬನ ಜೀವನದಲ್ಲಿ ನಾಲ್ಕು ಚಾನ್ಸ್ ಇರೋ ಚಾನ್ಸ್ ಇದ್ದರೂ (ಮತ್ತೆ ಮೂರು ವರ್ಷಕ್ಕೆಯೇ ಕಾಣಿಸುವುದು) ಮೂರಂತೂ ಗ್ಯಾರಂಟಿ. ಈ ಸಲ ಆಗದಿದ್ದರೆ ಇನ್ನೊಂದು ಸಲ ನೋಡಿದರೆ ಆಯ್ತು ಅಂತಿದ್ದರೊ.

''ಸಾವಿರಾರು ಚೂರುಗಳು ಹೊತ್ತಿ ಉರಿಯುವುದನ್ನು ನೋಡೋಕೆ ಎರಡು ಕಣ್ಣು ಸಾಲದು''

''ಬಣ್ಣ ಬಣ್ಣದ ಬೆಂಕಿ ಉಂಡೆಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸೆಕೆಂಡಿಗೆ ಎಪ್ಪತ್ತು ಕಿ.ಮೀ. ವೇಗದಲ್ಲಿ ಹಾರಾಡೋದನ್ನ ಮತ್ತೊಮ್ಮೆ ನೋಡೋದು ದುರ್ಲಭ''

''ಸಾಸಿವೆ ಕಾಳಿನ ಗಾತ್ರದ ಚೂರಿನಿಂದ ಹಿಡಿದು. ಟೈಟಾನಿಕ್ ಹಡಗಿನ ಗಾತ್ರದ ಚೂರುಗಳೂ ಬೀಳುತ್ತಂತೆ''

''ಭಾಣದ ಥರ ರೊಯ್ ಅಂತ ಹೋಗುತ್ತೆ, ಗುಂಡಿನ ಥರ ಮೋಡಗಳನ್ನ ಸೀಳತ್ತೆ''

''ಸ್ಪುಟ್ನಿಕ್ ವೇಗದಲ್ಲಿ ಹೋಗೋ ಚೂರುಗಳು ಡಿಕ್ಕಿ ಹೊಡೆದಾಗ ಇನ್ನಷ್ಟು ಸಾವಿರ ಚೂರುಗಳು ಹೊತ್ತಿ ಉರಿಯುತ್ಯಂತೆ'' ಅನ್ನೋ ಮಾತುಗಳು ನಿದ್ದೆಗೆಟ್ಟು ನೋಡುವ ಕುತೂಹಲವನ್ನು ನೂರ್ಮಡಿಸಿದವು.

ರಾತ್ರಿಯೆಲ್ಲ ಎದ್ದಿದ್ದು ಉಲ್ಕಾಪಾತವನ್ನು ನೋಡುವ ಠರಾವನ್ನು ನಾನಿಟ್ಟಾಗ ಪದ್ದಿ, ಪುಟ್ಟರು ಚಕಾರವೆತ್ತದೆ ಪಾಸೂ ಮಾಡಿಬಿಟ್ಟರು.

ಏಣಿ ತಂದೆವು - ತಾರಸಿಯ ಮೇಲೇರಲು. ಮಧ್ಯರಾತ್ರಿಯಿಂದ ಎಷ್ಟು ಹೊತ್ತು ಕೂತಿರಬೇಕಾಗುತ್ತೋ ಏನೋ! ಮಫ್ಲರು ಮಂಕಿ ಕ್ಯಾಪುಗಳು ತಲೆಕಾಯಿಗಳನ್ನಲಂಕರಿಸಿದವು. ಸ್ವೆಟರು ಕಂಬಳಿಗಳು ಕಾಯಗಳನ್ನು ಮುಚ್ಚಿದವು. ಗೂಬೆಗಳ ಥರ ಕೂತು. ನೋಡೋದು ಕಷ್ಟವಾಗುತ್ತೆ ಅಂದ ಪದ್ದಿ ಅಂದದ್ದಕ್ಕೆ ಪಕೋಡ ತಗೊಂಡು ಹೋಗೋಣಾಂತ ಪುಟ್ಟ ಸೂಚಿಸಿದ ತೊಗೊಂಡು ಹೋದರೆ ತಣ್ಣಗಾಗಿ ಬಿಡತ್ತೆ ಅಂತ ಸ್ಟೌವ್ವು, ಈರುಳ್ಳಿ (ಮೊನ್ನೆ ಪದ್ದಿ ಸೀರೆ ತೊಗೊಂಡಾಗ ಉಚಿತವಾಗಿ ಕೊಟ್ಟದ್ದು) ಇತ್ಯಾದಿಗಳನ್ನು ತಾರಸಿಗೆ ಸಾಗಿಸಿದೆವು. ಹನ್ನೆರಡೂವರೆಗೆ ತಾರಸಿವಾಸಿಗಳಾದೆವು. ಒಂದೂವರೆವರೆಗೂ ಕಾದೆವು. ನಕ್ಷತ್ರಗಳನ್ನ ಎಣಿಸುವ ಕಾಯಕಕ್ಕೆ ಪುಟ್ಟ ಬಾಯಿ ಹಾಕಿದ, ಒಂದು ಎರಡು ಮೂರು ಉಲ್ಕಾ ಆಮೇಲಿನ್ನೇನು' ಅಂತ ನಾನು ಹಾಡುತ್ತಿದ್ದೆ.

ಪದ್ದಿ ಸ್ಟೌ ಹಚ್ಚಿದಳು. ನಾನು ಈರುಳ್ಳಿ ಹಚ್ಚಿದೆ ಕಾಲು ಗಂಟೇಲಿ ಪಕೋಡ ಬಾಣಲೆಯಲ್ಲಿ ತೇಲಾಡಿತು. ಬಿಸಿ ಬಿಸಿಕ ಪಕೋಡಾನ ಬಾಯಿಗೆ ಹಾಕ್ಕೊಂಡು ಕಣ್ಣು ಮುಚ್ಚಿ ಮೆಲ್ಲುತ್ತಿದ್ದಂತೆ 'ಅಣ್ಣಾ ಅಲ್ನೋಡು' ಪುಟ್ಟ ಕಿರುಚಿದ.

'ಎಲ್ನೋ?' ಅಂತ ನಾನೂ ಕೂಗಿದೆ ಸುತ್ತಲೂ ನೋಡಿದೆ ಇನ್ನೊಂದೆರಡು ಕುರುಂ ಕುರುಂ ಆಯಿತು.

'ಅಲ್ನೋಡ್ರೀ' ಅಂತಂದವಳೇ.

'ಎಷ್ಟು ಚೆನ್ನಾಗಿದೇರೀ' - ಸೀದು ಹೋಗುತ್ತಿದ್ದ ಪಕೋಡವನ್ನು ಮರೆತು ಬಿಟ್ಟಕಣ್ಣು ಬಿಟ್ಟುಕೊಂಡು ಅರಚಿದಳು. ನನ್ನ ಬಾಯಲ್ಲಿದ್ದ ಪಕೋಡ ಕರಗಿತೇ ಹೊರತು ಉಲ್ಕಾಪಾತ ಕಾಣಿಸಲಿಲ್ಲ. ನಿರಾಸೆಯಿಂದ ಕಾಯುತ್ತಿದ್ದೆ. ನನಗೂ ಕಾಣಿಸಿಬಿಡ್ತು. ಅಲ್ನೋಡೀ' ಅಂತ ಗಂಟಲು ಹರಿಸಿಕೊಂಡೆ ಪದ್ದಿ ಕಿಸಕ್ ಅಂದಳು.

'ಆ ಮಹಡಿ ಮನೆಯೋರು ಹಚ್ಚಿಸಿದ ರಾಕೆಟ್ಟಣ್ಣಾ ಅದೂ' ಪುಟ್ಟ ಎಕ್ಸ್‌ಪ್ಲನೇಷನ್ ಕೊಟ್ಟ.

'ನಿಂತುಕೊಂಡ್ರೆ ಕಾಣಬಹುದೋ ಏನೋ' ಪುಟ್ಟ ಸಲಹಿಸಿದ.

ನಿಂತೆವು - ಸಾಲಾಗಿ - ಉತ್ತರ ಮುಖಿಗಳಾಗಿ,

ಅರವತ್ತು ನಿಮಿಷಗಳು ಉರುಳಿಬಿದ್ದವು. ಕಾಲುಗಳು ನಿಲ್ಲಲು ನಿರಾಕರಿಸಹತ್ತಿದವು. ಪಕ್ಕದ ಮನೆಯಿಂದ ವಾಗ್ಬಾಣ ಹಾರಿತು ಮೀನಾಕ್ಷಿಯದು.

''ಅಡ್ಡ ನಿಂತಿರೋದು ನೋಡಿ - ಗೋಡೆ ಹಾಗೆ. ನಾವು ನೋಡಿದ ಹಾಗೇ. ಇಳಿರ್ರೀ ಕೆಳಗೆ ತೆಪ್ಪಗೆ ಮಲಕ್ಕೊಳ್ಳೋಣ. ಅವರೇ ನೋಡಲಿ'' ಅಂತ. ಇನ್ನೂ ಅಲ್ಲೇ ನಿಂತಿರೋದು ಮರ್ಯಾದೆಯ ವಿಷಯವಲ್ಲ ಅಂತ ಇಳಿದೆವು. ಅವರಾದರೂ ಚೆನ್ನಾಗಿ ನೋಡಲಿ ಅಂತಂದುಕೊಂಡು.

ಪೇಪರ್ ಎತ್ತಿಕೊಂಡೆ ಬಣ್ಣದ ಚಿತ್ರ ಹೊಟ್ಟೆ ಉರಿಸಿತು. ಒಂದೇ ಸಮಾಧಾನ ಅಂದ್ರೆ, ಭಾರತದಲ್ಲಿರೋರಿಗೆ, ಅದರಲ್ಲೂ ಬೆಂಗಳೂರಿನ ದೇವಸಂದ್ರದ ಯಾರಿಗೂ ಕಾಣಿಸದಿದ್ದುದು. ಉಲ್ಕಾಪಾತವನ್ನು ಕಂಡವರು ಕುಣಿದಾಡಿದರಂತೆ ಕಾಣದಿದ್ದವರು ಪಕ್ಕದ ಮನೆಯವರುಗಳ ಮೇಲೆ ಕಿಡಿ ಕಾರಿ ಎಗರಾಡಿದ್ದನ್ನು ಪೇಪರಿನಲ್ಲಿ ಹಾಕಿರಲಿಲ್ಲ.

ಗ್ರಹಗಳು ಮನುಷ್ಯನ ಮೇಲೆ ದೃಷ್ಟಿ ಬೀರುತ್ವೆ. ಅವುಗಳ ಎಫೆಕ್ಟು ಮನುಷ್ಯನ ಮೇಲೆ ಇದ್ದೇ ಇರುತ್ವೆ. ಗ್ರಹಣಗಳದ್ದೂ ಅಷ್ಟೇ. ಅಂದಮೇಲೆ ಎಂಥ ಉಲ್ಕಾಪಾತಗಳದ್ದೂ ಇರಲೇಬೇಕು. ನಮ್ಮ ಮಾನ್ಯ ಮಂತ್ರಿಗಳು ಸುಮಾರು ಹೊತ್ತು ಎದ್ದಿದ್ದು 'ತಾರೆ'ಗಳನ್ನು ನೋಡಿ ಮಾರನೇ ದಿನ ಅದೇ ನೆನಪಿನಲ್ಲಿ 210 ಫೈಲ್‌ಗಳನ್ನು ಕ್ಲಿಯರ್ ಮಾಡಿರಬೇಕಾದರೆ ಆಂಧ್ರದ ಚಂ.ಬಾ.ನಾಯ್ಡು ಎಷ್ಟು ಕ್ಲಿಯರ್ ಮಾಡಿರಬಹುದು, ಬೇರೆ ಬೇರೆ ಮಂತ್ರಿ ಮಹೋದಯರು ಇನ್ನೆಷ್ಟೆಷ್ಟು ಕಡಿತಗಳನ್ನು ಚುಕ್ತಾ ಮಾಡಿರಬಹುದು, ಇತರೆ ಸರ್ಕಾರಿ ಗುಮಾಸ್ತರುಗಳು ಇನ್ನೆಷ್ಟೆಷ್ಟನ್ನು ಮುಗಿಸಿರಬಹುದು. ಟಿಂಪಲ್ಟನ್ನಿನ ಒಂದು ಚೂರನ್ನು ನೋಡದೆಯೇ ಇಷ್ಟು ಕೆಲಸ ಆಗಿರಬೇಕಾದರೆ ಇನ್ನು ಅದನ್ನ ನೋಡಿಬಿಟ್ಟಿದ್ದಿದ್ದರೆ ಕ್ಲಿಯರ್ ಮಾಡೋಕೆ ಫೈಲುಗಳೇ ಉಳಿತಿರ್ಲಿಲ್ಲವೇನೋ!

## ನಿಷೇಧ

**ಕೇಳಿ ಬರುತ್ತಿದೆ**
**ಕೂಗು ಎಲ್ಲೆಡೆ**
**ಮಾಡಿರಿ ಗುಟುಕ ನಿಷೇಧ**
**ಮುಂದೊಂದು ದಿನ ಹೇಳಬಹುದು ಜನ**
**ಮಾಡಿರಿ ಚುಟುಕ ನಿಷೇಧ**

**– ಎಚ್. ಡುಂಡಿರಾಜ್**

# ‘ರಾ. ಶಿ.’ ಮತ್ತು ‘ರತ್ನ’

– ಜಿ. ವೆಂಕಟಸುಬ್ಬಯ್ಯ

ನಮಗೆಲ್ಲ ಹಿರಿಯ ಮಿತ್ರರಾಗಿದ್ದ ಈ ಇಬ್ಬರನ್ನು ಕುರಿತು ಒಂದು ಕಿರುಲೇಖನವನ್ನು ಕೊಡಿ ಎಂದು ಶಿವಕುಮಾರರು ಕೇಳಿದಾಗ ಇಬ್ಬರ ಬಗ್ಗೆ ಒಟ್ಟಿಗೆ ಬರೆಯುವುದು ಹೇಗೆ ಎಂದು ನನ್ನ ಮನಸ್ಸು ಒಂದು ಪ್ರಶ್ನೆಯನ್ನು ಮುಂದಿಟ್ಟಿತು. ಸ್ವಲ್ಪ ಹೊತ್ತು ಈ ಇಬ್ಬರ ಕಾರ್ಯವಿಸ್ತಾರವನ್ನು ನೆನೆದಾಗ ಇಬ್ಬರಿಗೂ ಇರುವ ಸಾಮ್ಯ ನನಗೆ ಬೇಗನೆ ನೆನಪಿಗೆ ಬಂತು. ಇವರಿಬ್ಬರಲ್ಲಿ ನಮ್ಮ ಗೆಳೆಯರೆಲ್ಲ ಆಶ್ಚರ್ಯದಿಂದ ಮೆಚ್ಚಿಕೊಳ್ಳುತ್ತಿದ್ದ ಒಂದು ಗುಣವಿತ್ತು. ಹೊರ ನೋಟದಲ್ಲಿ ಶ್ರೀಸಾಮಾನ್ಯರಾಗಿ ಪ್ರಕಟವಾಗುತ್ತಿದ್ದರೂ ಇಬ್ಬರೂ ಅಂತರಾಳದಲ್ಲಿ ಗಾಢವಾಗಿ ಚಿಂತಕರಾಗಿದ್ದರು. ಭಾರತೀಯ ದರ್ಶನಗಳನ್ನು ಇಬ್ಬರೂ ಆಳವಾಗಿ ಅಭ್ಯಾಸ ಮಾಡಿ ಅದರ ವ್ಯಾಸಂಗದಲ್ಲಿ ನಿತರಾಗಿದ್ದವರು. ಇವರಿಬ್ಬರ ಈ ಮುಖ ಬಹು ಜನಗಳಿಗೆ ತಿಳಿಯದು. ಕೆಲವು ವೇಳೆ ಶಿವರಾಂ ಮತ್ತು ರಾಜರತ್ನಂ ಅವರ ಜತೆಗೆ ಶ್ರೀರಂಗರೂ ಕೂಡಿರುತ್ತಿದ್ದರು ಅಂಥ ಸಂದರ್ಭಗಳಲ್ಲಿ ಅವರೊಡನೆ ನಡೆಯುತ್ತಿದ್ದ ಸಂಭಾಷಣೆಗಳಲ್ಲಿ ಅಡಗಿರುತ್ತಿದ್ದ ಆತ್ಮ ಚಿಂತನೆಯ ಆಸಕ್ತಿ ಪ್ರಕಟವಾಗುತ್ತಿತ್ತು. ರಾಜರತ್ನಂ ಅವರ ಕಂಬಳಿಸೇವೆ, ಶಕಾರ, ನಿರ್ಭಯಾಗ್ರಗ್ರಫಿಗಳನ್ನು ಓದುವವರಿಗೆ ಕಾಣುವ ವ್ಯಕ್ತಿಯೇ ಬೇರೆ. ಅವರ ಭ್ರಮರ, ಪಾಲಿಪಜ್ಜ ಪುಷ್ಪಾಂಜಲಿ, ಚೀಣಾದೇಶದ ಯಾತ್ರಿಕರು ಮುಂತಾದ ರಚನೆಗಳ ವ್ಯಕ್ತಿಯೇ ಬೇರೆ. ಕೊರವಂಜಿಯ ‘ರಾಶಿ’ಯೇ ಬೇರೆ. ಕಾಲವನ್ನು ಕುರಿತು ಚಿಂತನೆಯನ್ನು ಸರಳ ಸುಲಭ ಶೈಲಿಯಲ್ಲಿ ವಿವರಿಸುವ ‘ರಾಶಿ’ಯೇ ಬೇರೆ. ಕೆಲವು ವೇಳೆ ರಾಶಿಯವರು ತಮ್ಮನ್ನು ಯಮ ಶಿವರಾಂ ಎಂದು ಕರೆದುಕೊಳ್ಳುತ್ತಿದ್ದರು. ಅದು M. Shivaram ಎಂಬುದರ ಅಪಭ್ರಂಶ. ಕೊರವಂಜಿಯಲ್ಲಿ ಪ್ರಕಟವಾಗುತ್ತಿದ್ದ ಹಾಸ್ಯ ಲೇಖನಗಳಲ್ಲಿ ಅನೇಕ ಹೆಸರುಗಳು ಇರುತ್ತಿದ್ದುವು. ಆ ಹೆಸರುಗಳಲ್ಲಿ ಬರೆಯುವವರು ಯಾರು ಎಂಬುದು ಸುಲಭವಾಗಿ ಗೊತ್ತಾಗುತ್ತಿರಲಿಲ್ಲ. ಟಿಯೆಸ್ಸಾರ್, ನಾ.ಕ. ಮುಂತಾದುವು ಎಲ್ಲರಿಗೂ ಪರಿಚಿತರಾದರೂ ಮಿಕ್ಕ ಲೇಖಕರ ಹೆಸರಿನವರೆಲ್ಲ ನಿಜವಾಗಿ ಅಪರಿಚಿತರು. ಆದರೆ ಒಂದು ಗುಟ್ಟು ನಮಗೆ ಬಹುಕಾಲವರೆಗೆ ತಿಳಿಯಲಿಲ್ಲ. ಒಮ್ಮೆ ನಮ್ಮ ಉಪಾಧ್ಯಾಯರಾಗಿದ್ದ ನಾ. ಕಸ್ತೂರಿಯವರೊಡನೆ ಒಂದು ಹಾಸ್ಯ ಲೇಖನವನ್ನು ಕುರಿತು ಮಾತನಾಡುತ್ತಿದ್ದಾಗ ಗುಟ್ಟು ಹೊರಬಿತ್ತು. ಇವರಲ್ಲಿ

ಕೆಲವರು, ಆಗ, ಅನೇಕ ಬೇರೆ ಬೇರೆ ಹೆಸರುಗಳಲ್ಲಿ ತಮ್ಮ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಕನ್ನಡದಲ್ಲಿ ಎಷ್ಟೊಂದು ಜನ ಹಾಸ್ಯ ಲೇಖಕರಿದ್ದಾರೆ ಎಂಬಂತೆ ಚಿತ್ರ ಮೂಡುತ್ತಿತ್ತು. ಆದುದರಿಂದಲೆ ಇತರರು ಈ ಕ್ಷೇತ್ರಕ್ಕೆ ಆಕರ್ಷಿತರಾದದ್ದೂ ನಿಜ.

ಇದನ್ನೆಲ್ಲ ಕುರಿತು ಯೋಚಿಸುವಾಗ ಮಂಕುತಿಮ್ಮನ ಒಂದು ಪದ್ಯವನ್ನು ಡಿ.ವಿ.ಜಿ. ಅವರು ರಾಶಿ-ರತ್ನ ಇವರಿಬ್ಬರನ್ನೇ ಕುರಿತು ರಚಿಸಿದರೇ ಎಂಬ ಅನುಮಾನ ಬರುತ್ತದೆ. ಆ ಪದ್ಯ ಹಾಗಿದೆ:

ಎರಡು ಕೋಣೆಗಳ ನೀಂ ಮಾಡು ಮನದಾಲಯದಿ
ಹೊರಕೋಣೆಯಲಿ ಲೋಗರಾಟಗಳನಾಡು
ವಿರಮಿಸೊಬ್ಬನೆ ಮೌನದೊಳೊಳ ಮನೆಯ ಶಾಂತಿಯಲಿ
ವರಯೋಗಸೂತ್ರವಿದು - ಮಂಕುತಿಮ್ಮ

ಈ ದೃಷ್ಟಿಯಿಂದ ರಾಶಿ-ರತ್ನ ಇಬ್ಬರೂ ಸಾಹಿತ್ಯಯೋಗಿಗಳು.

(ಶ್ರೀಯುತ ವೆಂಕಟಸುಬ್ಬಯ್ಯನವರು, ಕೊರವಂಜಿಯ ಲೇಖನವೊಂದನ್ನು, ಓದುಗರಿಗೆ ಪರಿಚಯಿಸುವ ಸಲುವಾಗಿ ಕಳಿಸಿದ್ದಾರೆ. ಇದನ್ನು ಫೆಬ್ರವರಿ 1999ರ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. - ಸಂಪಾದಕ)

## ಥಳುಕು - ತುಣುಕು

### ಪತ್ರಿಕಾ - ಪ್ರಮಾದಗಳು

ಸುದ್ದಿ - ಎರಡನೆ ಮಹಾಯುದ್ಧ ಮುಗಿದ ಮೇಲೆ ಭಾರತದಿಂದ ಯೂರೋಪಿಗೆ ಮಾವಿನಹಣ್ಣು ಮತ್ತು ಫರಂಗಿ ಹೆಣ್ಣುಗಳ ರವಾನೆಯಾಗುಕ್ಕೆ ಆರಂಭವಾಯ್ತು.

ಜಾಹಿರಾತು - ಶ್ರೀಮಾನ್ ನಾಗೇಶರಾಯರು ಶಕುಂತಲ ನಾಟಕದಲ್ಲಿ ಮುಖ್ಯ ಪಾತ್ರವನ್ನು ವರಿಸುವರು - ಎಂದು ಅಚ್ಚಾಗಿತ್ತು

# ನಗೆಗಾರ ನಾಡಿಗೇರ್

– ವೈಎನ್. ಗುಂಡೂರಾವ್

ಸಾವಿರದ ಒಂಬೈನೂರ ನಲವತ್ತೈದರಿಂದ, ಸುಮಾರು ಮೂವತ್ತೇಳು ವರ್ಷಗಳ ಕಾಲ ಅವಿರತವಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಶ್ರಮಿಸಿದ ನಾಡಿಗೇರರು ನಲವತ್ತೈದಕ್ಕೂ ಮಿಕ್ಕು ಸಾಮಾಜಿಕ ಕಾದಂಬರಿಗಳನ್ನು ರಚಿಸಿ, ಇದೇ ಕಾಲದಲ್ಲಿ ಹೊರತಂದ ಹಾಸ್ಯಲೇಖನ ಸಂಕಲನಗಳು ಹದಿಮೂರೇ ಆದರೂ ಅವರಿಗೆ ಅಂಟಿಕೊಂಡ ಹೆಸರೆಂದರೆ ನಗೆಗಾರ ನಾಡಿಗೇರರೆಂದೇ!

ಬಹುಶಃ ಇದಕ್ಕೆ ಕಾರಣ ಸಾವಿರಾರು ಪುಟಗಳಷ್ಟು ಅವರು ಬರೆದ ಹಾಸ್ಯ ಲೇಖನಗಳಿಗಿಂತ ಹೋದೆಡೆಯಲ್ಲೆಲ್ಲಾ ಮಾಡುತ್ತಿದ್ದ ಹಾಸ್ಯಪೂರ್ಣ ಭಾಷಣಗಳು. ಭಾಷಣಕ್ಕೇ ಆಗಲೀ, ಬರವಣಿಗೆಗೆ ಆಗಲೀ 'ಮೂಡ್' ಬರಬೇಕೆಂದು ಎಂದೂ ಕಾದವರಲ್ಲ. ಮೂಡ್ ತರಿಸಿಕೊಂಡು ಬರೆದು ಬಿಸಾಡುತ್ತಿದ್ದರು. ಶ್ರೀ ಜಿ. ನಾರಾಯಣರವರ ಸಂಪಾದಕತ್ವದಲ್ಲಿ ಇಂದೂ ಪ್ರಕಟವಾಗುತ್ತಿರುವ 'ವಿನೋದ' ಹಾಸ್ಯ ಪತ್ರಿಕೆಯ ಕಾರ್ಯಾಲಯದೆಡೆ ಹೆಜ್ಜೆ ಹಾಕಿದ ನಾಡಿಗೇರರನ್ನು ಶ್ರೀ ನಾರಾಯಣರು ಲೇಖನ ಕೇಳಿದ್ದೇ ತಡ, 'ಒಂದಿಷ್ಟು ಪೇಪರ್ ಹಾಕಿ ಇತ್ತಕಡೆ' ಎಂದು ಅಲ್ಲೇ ಬೆಂಚಿನ ಮೇಲೆ ಕುಳಿತು, ಜುಬ್ಬದ ಜೇಬಿನಿಂದ ಫೌಂಟನ್ ಪೆನ್ನು ತೆಗೆದು ಬರೆಯಲು ಪ್ರಾರಂಭಿಸಿದವರಿಗೆ ಒಂದು ಕಪ್ ಕಾಫಿ, ಅರ್ಧ ಪ್ಯಾಕ್ ಸಿಗರೇಟ್ ತರಿಸಿಕೊಟ್ಟರೆ ಸಾಕು. ಅರ್ಧ ಗಂಟೆಯಲ್ಲಿ ಹಾಸ್ಯಲೇಖನ ಬರೆದು ಓದಿ, ಜಿ. ನಾರಾಯಣರನ್ನು ನಗಿಸಿ, ಕೊಟ್ಟ ಸಂಭಾವನೆಯನ್ನು ಜೇಬಿಗಿಳಿಸಿ ನಡೆದುಬಿಡುತ್ತಿದ್ದರು.

ಇಂಥ ಹಾಸ್ಯ ಚಕ್ರವರ್ತಿ ನಾಡಿಗೇರರ ಜೀವನ ಸುಖಮಯವಾದದ್ದೇನಾಗಿರಲಿಲ್ಲ. ವಿದ್ಯೆ ಅಷ್ಟಕ್ಕಷ್ಟೆ. ಫೋರ್ತ್ ಫಾರಂ ಎರಡು ವರ್ಷ, ಫಿಫ್ತ್‌ಫಾರಂ ಎರಡು ವರ್ಷ ಓದಿ ಶಾಲೆಗೆ ಶರಣು ಹೊಡೆದರು. ಜೀವನವನ್ನೇ ಅನುಭವ ಶಾಲೆಯನ್ನಾಗಿಸಿಕೊಂಡು ಜವಳಿ ಅಂಗಡಿ, ಹೋಟೆಲ್, ಇದ್ದಿಲು ಸುಡುವಿಕೆ, ಶ್ಯಾನುಭೋಗಿಕೆ ಕಡೆಗೆ ಪತ್ರಿಕಾ ವ್ಯವಸಾಯ ಹಿಡಿದು ಸಹ ಸಂಪಾದಕ, ಸಂಪಾದಕ ಏನೇನೋ ಆದರು.

ಸ್ಕೂಲಿನಲ್ಲಿದ್ದಾಗಲೇ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲಾ ಓದಿದರು. ಇಂಗ್ಲಿಷ್ ಪುಸ್ತಕ ಓದುವ ಚಟ ಬೆಳೆಸಿಕೊಂಡಿದ್ದು, ಸಾವಿರಾರು ಪುಸ್ತಕಗಳನ್ನು ತಿರುವಿ ಹಾಕಿದರು. ಬಹುಶಃ ಇದೇ ಅವರಿಗೆ ಬರವಣಿಗೆಯ ಬಂಡವಾಳವಾಯಿತೆಂದರೆ ತಪ್ಪಾಗಲಾರದು.

ಹಾಸ್ಯ ಸಾಹಿತಿಯಾದವನು ನೋವನ್ನು ನಗುನಗುತ್ತಾ ನುಂಗಬೇಕು, ನುಂಗಿದ ನೋವನ್ನು ಸ್ಮರಿಸಿ ನಗಬೇಕು; ನೋವನ್ನು ನಗೆಯಾಗಿ ಪರಿವರ್ತಿಸಬೇಕು; ನೋವಿನ ಖಾಯಿಲೆಗೆ ನಗೆಯ ಇಂಜಕ್ಷನ್ ಕೊಟ್ಟು ರೋಗ ಪರಿಹರಿಸಿಕೊಳ್ಳಬೇಕು. ಇದು ನಾಡಿಗೇರರ ನಗೆ ಸಿದ್ಧಾಂತ. ಈ ಸಿದ್ಧಾಂತವನ್ನು ಕಡೆಯವರೆವಿಗೂ ಪಾಲಿಸಿದರು. ಕನ್ನಡದ ಜನತೆಯನ್ನು ನಗಿಸಿದರು.

''ಅವತ್ತು ಮನೆಯಲ್ಲಿ ಅಕ್ಕಿ ಇರಲಿಲ್ಲ - ಯಾವತ್ತೂ ಇರುತ್ತಿರಲಿಲ್ಲ ಅನ್ನಿ, ಅನಾಯಾಸವಾಗಿ ಶ್ರಾವಣ ಮಾಸ ಬರಬೇಕೆ! ನನ್ನ ಹೆಂಡತಿ ಒಂದು ಉಪಾಯ ಹುಡುಕಿ ನಮ್ಮಿಬ್ಬರು ಹುಡುಗರಿಗೂ ಹಣೆಗೆ ಮೂರು ನಾಮ ಬರೆದು ಕೈಯಲ್ಲಿ ಒಂದೊಂದು ಕೊಳಗ ಕೊಟ್ಟು 'ವೆಂಕಟೇಶಾಯ ಮಂಗಳಂ' ಹೇಳಿ ಕಳುಹಿಸಿದಳು. ಹುಡುಗರು ಒಂದು ಹತ್ತು ಮನೆಗೆ ಹೋಗಿದ್ದಿರಬಹುದು. ಅವರು ಮನೆಗೆ ಹಿಂದಿರುಗಬೇಕೆನ್ನಿಸುವಷ್ಟರಲ್ಲಿ 'ಭಿಕ್ಷುಕರ ಪರಿಹಾರ ಸಮಿತಿಯ ವ್ಯಾನ್' ಬಂದು ಇಬ್ಬರನ್ನೂ ಎಳೆದೊಯ್ದರು. ಮಧ್ಯಾಹ್ನ ಹನ್ನೆರಡರ ಹೊತ್ತಿಗೆ ಮನೆಗೆ ಹೋದೆ. ನನ್ನ ಹೆಂಡತಿ ಗೋಳೋ ಎಂದು ಅಳುತ್ತಿದ್ದಳು. ವಿಷಯ ತಿಳಿಸಿದಳು. ''ಬಿಡೇ... ಯಾಕೆ ಅಳ್ತೀಯಾ? ಚೂಟಿ ಹುಡುಗರು, ಎಂಥಾ ಬೇಲಿ, ಕಾಂಪೌಂಡ್ ಕಟ್ಟಿರಲಿ ಹಾರಿಕೊಂಡು ಬಂದು ಬಿಡ್ತಾರೆ'' ಅಂತಾ ಸಮಾಧಾನ ಹೇಳಿದೆ.

''ಅದು ನನಗೊತ್ತುರೀ...'' ಅತ್ತಿದ್ದು ಅದಕ್ಕಲ್ಲ.

''ಮತ್ತೇಕೆ?''

''ಕಲ್ಲಿನಂಥಾ ಹಿತ್ತಾಳೆ ಕೊಳಗ ತಗೊಂಡ್ಹೋದ್ರು, ಮನೇಲಿದ್ದದ್ದು ಎರಡೇ. ವಾಪಸ್ಸು ಬರುತ್ತೋ ಇಲ್ವೋ ಅಂತಾ...'' ಎಂದು ಬಿಕ್ಕಿ ಬಿಕ್ಕಿ ಅತ್ತಳು.

ಅವಳು ಹೇಳಿದಂತೆ ಆಯಿತು. ಹುಡುಗರು ವಾಪಸ್ಸು ಬಂದರು. ಕೊಳಗ ಬರಲಿಲ್ಲ.''

ಹೀಗೆ ಹೇಳಿದಾಗ ಕೇಳುಗರು ನಕ್ಕು ಹಗರಾದರೂ, ತಮ್ಮ ಕಷ್ಟ ಕಾರ್ಪಣ್ಯದ ಬದುಕಿಗೆ, ಜೀವನದ ನೋವಿಗೆ ಹೇಗೆ ನಗೆಲೇಪನ ಮಾಡುತ್ತಿದ್ದರು ಎಂಬುದು ಅರಿವಾದೀತು.

ಇದನ್ನೇ ಬೀಚಿಯವರೂ ಹೇಳುತ್ತಿದ್ದುದು ''ಭಾಷಣದಿಂದ, ಬರಹದಿಂದ, ಸಹಸ್ರಾರು ಜನರನ್ನು ನಗಿಸಿದ್ದೇನೆ. ಹಾಸ್ಯಲೇಖಕ, ಸರ್ಕಸ್ಸಿನ ಬಫೂನರಿಗೂ ಅಗಾಧ ವ್ಯತ್ಯಾಸವಿದೆ. ಈ ನಗೆ ಸಾಹಿತಿಯ ಹಾಸ್ಯದ ಹಿಂದೆ ಒಂದು ನೋವಿರಬೇಕು, ನಕ್ಕವರು ಒಮ್ಮೆ ನಿಂತು ಯೋಚಿಸುವಂತಾಗಬೇಕು, ಅದೇ ಉತ್ತಮ ಹಾಸ್ಯ.''

ನಾಡಿಗೇರರು ಹೇಳಿದ್ದು ಅದೇ. ''ಹಾಸ್ಯಗಾರನ ಮನೋಧರ್ಮ ಹೇಗಿರಬೇಕೆಂದರೆ, ಹಾಸ್ಯಗಾರ ಇತರರನ್ನು ನೋಡಿ ನಗಬೇಕು, ಇತರರು ತನ್ನನ್ನು ನೋಡಿನಕ್ಕಾಗ ಅವರೊಂದಿಗೆ ನಗಬೇಕು, ಎಲ್ಲಕ್ಕಿಂತ ಹೆಚ್ಚಾಗಿ ತನ್ನನ್ನು ನೋಡಿ ತಾನೇ ನಗಬೇಕು'' ಎಂಬುದನ್ನು ಅವರು ಜೀವನ ಪೂರ್ತಾ ಅಳವಡಿಸಿಕೊಂಡು, ಅದರಂತೆ ಹಾಸ್ಯ ರಚಿಸಿ ರಂಜಿಸಿದರು.

ನನ್ನ ಗೆಳೆಯರು ನನ್ನನ್ನು ಇಂದಿಗೂ 'ಕೃಷಣರಾಯ'ನೆಂದೇ ಕರೆಯುವುದು ಎಂದು ತಮ್ಮನ್ನು ತಾವೇ ಗೇಲಿ ಮಾಡಿಕೊಂಡು ನಗೆ ಅಲೆ ಎಬ್ಬಿಸುತ್ತಿದ್ದರು. ಅವರಿದ್ದುದು ಕೃಶಕಾಯರಾಗಿಯೆ!

ಒಮ್ಮೆ ನಾಡಿಗೇರರಿಗೆ ಸಖತ್ ಖಾಯಿಲೆಯಾಗಿ ದಾವಣಗೆರೆ ಆಸ್ಪತ್ರೆಗೆ ಸೇರಿಸಿದರಂತೆ, ನಾಡಿಗೇರರ ನಗೆಲೇಖನಗಳನ್ನು ಪತ್ರಿಕೆಯಲ್ಲಿ ಓದಿದ್ದ ಡಾಕ್ಟರು ಬಹಳ ಶ್ರದ್ಧೆಯಿಂದ ನೋಡಿಕೊಂಡು - ನಗೆಗಾರರನ್ನು ಉಳಿಸಿಕೊಂಡರು. ಕಡೆಗೊಂದು ದಿನ ಆಸ್ಪತ್ರೆಯಿಂದ ಬಿಡುಗಡೆಯಾಗುವ ದಿನ ಬಂದೇಬಿಟ್ಟಿತು.

ಮಂಕಾಗಿ ಕುಳಿತಿದ್ದ ನಾಡಿಗೇರರನ್ನು ನೋಡಿದ ಡಾಕ್ಟರಿಗೆ ಗಾಬರಿಯಾಯಿತು.

''ಅಲ್ಲಾ ನಾಡಿಗೇರ್, ಗುಣಮುಖರಾಗಿ ಮನೆಗೆ ಹೋಗೋದಿನ ನಗುವುದು ಬಿಟ್ಟು ಸಪ್ಪಗೆ ಕುಳಿತಿದ್ದೀರಲ್ಲಾ?''

ಸಾರ್, ನಾನು ಬಹಳ ನಿಯತ್ತಿನ ಮನುಷ್ಯ, ಮಾತು ಕೊಟ್ಟಮೇಲೆ ನಡೆಯದಿದ್ದರೆ ಹೇಗೆ? ನಾನು ಆಸ್ಪತ್ರೆಗೆ ಸೇರೋಕೆ ಮುಂಚೆ, ನನ್ನ ತಮ್ಮನ ಬಳಿ ಹಣ ಕೊಟ್ಟು ''ಇನ್ನು ಆಯ್ತು, ನನ್ನ ಕಥೆ ಮುಗೀತು, ಇನ್ನು ಆಸ್ಪತ್ರೆಯಿಂದ ಬರೋಲ್ಲ, ಈ ದುಡ್ಡು ನನ್ನ ಕರ್ಮಾಂತರಕ್ಕೆ ಅಂತಾ ಇಟ್ಕೊ'' ಎಂದು ಹೇಳಿ ಬಂದಿದ್ದೆ. ''ಈಗ ಹ್ಯಾಗೆ ಹಿಂದಕ್ಕೆ ಹೋಗ್ಲಿ, ಹ್ಯಾಗ್ ಮುಖ ತೋರಿಸ್ಲಿ, ಅದೂ ಅಲ್ದೆ ಯಾವ ಮುಖ ಇಟ್ಕೊಂಡು ದುಡ್ಡು ಹಿಂದಕ್ಕೆ ಕೇಳ್ಲಿ'' ಎಂದರಂತೆ. ಇದನ್ನು ಕೇಳಿದ ಡಾಕ್ಟರು ಬಿದ್ದು ಬಿದ್ದು ನಕ್ಕರಂತೆ.

ಹೀಗೆ ನಗೆ ಉಕ್ಕಿಸುವಲ್ಲಿ ಹೆಂಡತಿ, ಮಕ್ಕಳು ಎಲ್ಲರನ್ನೂ ರಂಗದ ಮೇಲೆ ಎಳೆದು ತಂದು ಬಿಡುತ್ತಿದ್ದರು.

''ಎಲ್ಲಿ ಮಕ್ಕಳು ಕಾಣೋದೇ ಇಲ್ವಲ್ಲಾ!'' ಎಂದು ಚಾಕಲೇಟ್ ತೆಗೆದು, ನಾಡಿಗೇರರ ಮನೆಯವರನ್ನು ಮಾತನಾಡಿಸಿದಾಕೆ ಕೇಳಿದರು.

''ಇರೋವ್ರಿಬ್ರು, ಎಲ್ಲೋ ಆಟಕ್ಕೆ ಹೋಗಿರಬೇಕು''

''ಇಬ್ರು ಆಚೆ ಹೋದ್ರೆ ಉಳಿದವರು...?''

ನನಗಿರೋವ್ರು ಇಬ್ಬರೇ ಗಂಡು ಮಕ್ಕಳು

''ಅಯ್ಯೋ ರಾಮ, ಹದಿಮೂರು ಜನ ಮಕ್ಕಳು ಅಂತಾ ಪೇಪರಿನಲ್ಲಿ ಬರ್‍ಕೊಂಡಿದ್ದೀರಲ್ರೀ...'' ಎಂದು ಆಶ್ಚರ್ಯಚಕಿತರಾದರು ಬಂದಿದ್ದವರು. ಇದು ನಾಡಿಗೇರರ ಸಹಜ ಶೈಲಿಯ ಹಾಸ್ಯದ ತುಣುಕು.

ಇಂಥ ಸಹಜ ಶೈಲಿಯ ಹಾಸ್ಯ ಬರಹಗಾರರಾದ ನಾಡಿಗೇರರು ಬರೆದರೂ ಸರಿ, ಭಾಷಣಕ್ಕೆ ನಿಂತರೂ ಸರಿ.

ಮಲ್ಲೇಶ್ವರಂ ಗಾಂಧಿ ಸಾಹಿತ್ಯ ಸಂಘದಲ್ಲೊಮ್ಮೆ ಒಂದು ಸಂಜೆ ಅಧ್ಯಕ್ಷತೆ ವಹಿಸಿದ ನಾಡಿಗೇರರ ಭಾಷಣ. ''ಮೊನ್ನೆ ನಮ್ಮ ಮನೆ ಹಜಾರದಲ್ಲಿ ಮಂಚದ ಮೇಲೆ ಶಾಲು ಹೊದ್ದುಕೊಂಡು - ಸನ್ಮಾನ ಮಾಡಿದ ಶಾಲಿನ ಉಪಯೋಗವಾದರು ಆಗಬೇಕಲ್ಲ! ಹೀಗೆ ಶಾಲು ಹೊದ್ದುಕೊಂಡು ಪೇಪರ್ ಓದುತ್ತಿದ್ದೆ - ನನ್ನವಳು ಅಡಿಗೆ ಮನೆಯಲ್ಲಿ ಕೆಲಸದಲ್ಲಿದ್ದಳು. ಅಡಿಗೆ ಮನೆಯಿಂದಲೇ ಪೇಪರ್ ಓದುತ್ತಿದ್ದ ನನ್ನನ್ನು ''ಏನ್ರೀ ಅದು ಧೊಪ್ ಅಂತಾ ಬಿದ್ದ ಸದ್ದು'' ಎಂದು ಕೂಗಿಕೊಂಡಳು - ಗಾಬರಿಯಿಂದ.

''ಏನೂ ಇಲ್ವೆ... ಶಾಲು ಬಿತ್ತು'' ಅದಕ್ಯಾಕೆ ಗಾಬರಿ ಪಡ್ತೀಯಾ?

ಮತ್ತೊಮ್ಮೆ ಅಡಿಗೆ ಮನೆಯಿಂದಲೇ ಕೂಗಿಕೊಂಡಳು. ''ಏನ್ರೀ ಅದು ಶಾಲು ಬಿದ್ದರೆ ಅಷ್ಟು ಸದ್ದಾಗುತ್ತಾ?''

''ಹೌದು ಕಣೇ, ಶಾಲಿನೊಳಗೆ ನಾನಿದ್ದೆನಲ್ಲಾ....!''

ಹೀಗೆ ನಾಡಿಗೇರರ ಬತ್ತಳಿಕೆಯಿಂದ ಬರುತ್ತಿದ್ದ ಹಾಸ್ಯದ ಬಾಣಗಳೆಷ್ಟೋ!

ಒಮ್ಮೆ ತಿ.ತಾ. ಶರ್ಮರವರು ಎದುರಿಗೆ ಸಿಕ್ಕ ನಾಡಿಗೇರರಿಗೆ ''ಏನು ನಾಡಿಗೇರರೇ ಮನೆ ಬದಲಾಯಿಸಿ ಈಗ ಸರ್ವೇಯರ್ ಬೀದಿಗೆ ಬಂದಿದ್ದೀರಂತೆ?''

''ಹೌದೌದು, ನಾನು ಸರ್ವೈವರ್ ಬೀದಿಯಲ್ಲೇ ಇರೋದು'' ಎಂದು ನಕ್ಕು ನುಡಿದರು ನಾಡಿಗೇರರು.

ಹೀಗೆ ಕೈಲಾಸಂ ರೀತಿ ತಕ್ಷಣದ ಹಾಸ್ಯಕ್ಕೇನೂ ಕೊರತೆ ಇರಲಿಲ್ಲ.

ಮಲ್ಲಿಗೆ ಪತ್ರಿಕೆಯ ಸಂಪಾದಕರಾಗಿ ಸೇರಿದ ಮೇಲೆ ನಾಡಿಗೇರರ ಸ್ಥಿತಿ ಕೊಂಚ ಸುಧಾರಿಸಿತ್ತು. ಒಮ್ಮೆ ಭೇಟಿಮಾಡಲು ಬಂದ ಸ್ನೇಹಿತರನ್ನು ಮನೆಯೊಳಗೆ ಕರೆದೊಯ್ದು ಕುಳ್ಳಿರಿಸಿದರು. ಆಗ ಸ್ನೇಹಿತರು ''ಹೇಗಿದ್ದೀರಾ ಸಾರ್, ಹೇಗಿದೆ ಈಗ ಪರಿಸ್ಥಿತಿ?'' ಎಂದಾಗ ನನಗೇನ್ರಿ ತೊಂದರೆ ಮನೆಯಲ್ಲಿ ''ಎಂಭತ್ತು ಪೌಂಡ್ ಚಿನ್ನವಿದೆ'' ಎಂದರಂತೆ. ಕೇಳಿದ ಸ್ನೇಹಿತರು ಹೌಹಾರಿದರು.

''ಪರವಾಗಿಲ್ಲ ಸಾರ್ ಹಾಗಾದರೆ!'' ಎಂದಾಗ ಬನ್ನಿ ತೋರಿಸುತ್ತೇನೆ ಎಂದು ಹೆಂಡತಿಯನ್ನು ಹೊರಗೆ ಕರೆತಂದು ಇವಳೇ ನನ್ನ 'ಚಿನ್ನ' ಎಂದು ಹೆಂಡತಿಯನ್ನು ತೋರಿಸಿದರಂತೆ.

ಹೀಗೆ ಮನೆ ಮಕ್ಕಳು, ಹೆಂಡತಿ, ಕಡೆಗೆ ತಮ್ಮನ್ನೂ ಬಿಡದೆ ನಗೆ ವಸ್ತುವನ್ನಾಗಿಸಿಕೊಂಡು ಹಾಸ್ಯದ ಹೊನಲು ಹರಿಸಿದ ಚಕ್ರವರ್ತಿಗೆ ಷಷ್ಟ್ಯಬ್ದಿ ಸಮಾರಂಭವನ್ನು ನಟನ ಕಲಾ ಸಂಘದವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿ, ಅವರ ಹೆಂಡತಿಯನ್ನು ವೇದಿಕೆಯ ಮೇಲೆ ಕುಳ್ಳಿರಿಸಿದರು. ನಾಡಿಗೇರರಿಗೆ ಶಾಲು ಹೊದ್ದಿಸಿ, ಹಾರ ಹಾಕುವ ಸಂದರ್ಭದಲ್ಲಿ, ನಾಟಕರತ್ನ ದಿವಂಗತ ಜಿ.ಎಚ್. ವೀರಣ್ಣನವರು ''ಈ ಯಮ್ಮನಿಗೂ ಹಾರಹಾಕಿ, ಈ ಪುಣ್ಯಾತ್ಮನ ಹತ್ತಿರ ಅದು ಹೇಗೆ ಕಾಲ ನೂಕಿದ್ದಾಳೋ....'' ಎಂದಾಗ ಪ್ರೇಕ್ಷಕರಿಂದ ನಿಲ್ಲದ ಕರತಾಡನ.

ಇಂಥ ಹಾಸ್ಯ ಚಕ್ರವರ್ತಿ ಅ.ನ.ಕೃ. ಕೈಗೆ ಸಿಕ್ಕಿ ಫಜೀತಿ ಅನುಭವಿಸಿದ್ದು ಉಂಟು, ಆಗ ಅ.ನ. ಕೃಷ್ಣರಾವ್, ನಾಡಿಗೇರ್ ಕೃಷ್ಣರಾವ್‌ರವರ ಜೋಡಿ ಭಾಷಣಗಳು ಎಲ್ಲೆಡೆಯಲ್ಲಿಯೂ ನಡೆಯುತ್ತಿದ್ದ ಕಾಲ. ಒಬ್ಬರನ್ನೊಬ್ಬರು ಬಿಟ್ಟಿರದ ನಂಟು. ನಾಲ್ಕಾರು ದಿವಸ ಕಾಣದಿದ್ದ ನಾಡಿಗೇರರು ಒಮ್ಮೆ ಮೆಜೆಸ್ಟಿಕ್ ಬಳಿ ಅ.ನ.ಕೃ. ಕೈಗೆ ಸಿಕ್ಕಿ ಬಿದ್ದರು. ಯಾವುದೋ ತರಾತುರಿಯಲ್ಲಿರುವೆನೆಂದು ಬಸ್ಸು ಏರಲು ಓಡಿದ ನಾಡಿಗೇರರನ್ನು ಹಿಡಿದಿಟ್ಟುಕೊಳ್ಳಲು ಅ.ನ.ಕೃ. ತಕ್ಷಣ ಉಪಾಯ ಹೂಡಿ, ಓಡಿಹೋಗಿ ಬಸ್ಸು ಹತ್ತುತ್ತಿದ್ದವರನ್ನು ತೋರಿಸಿ, ಕಳ್ಳ... ಕಳ್ಳ... ಎಂದು ಕೂಗಿದ್ದೇ ತಡ, ಹತ್ತಿರದಲ್ಲಿದ್ದವರು ನಾಡಿಗೇರರನ್ನು ಹಿಡಿದು ತಂದು ಅ.ನ.ಕೃ. ಕೈಗೆ ಒಪ್ಪಿಸಿದರಂತೆ. ಅಷ್ಟರಲ್ಲಿ ಬಸ್ಸು ಹೊರಟುಹೋಯಿತು. ಅ.ನ.ಕೃ. ನಗುತ್ತಾ ''ಬಸ್ಸು ಹೊರಟುಹೋಯಿತು, ಅದ್ಹೇಗೆ ಹೋಗ್ತೀರಾ ಹೋಗಿ ಈಗ'' ಎಂದರಂತೆ.

ಬರೇ ನಗೆ ಚಟಾಕಿ ಹಾರಿಸುವುದರ ಜೊತೆಗೆ ಆಗಾಗ್ಗೆ ಕನ್ನಡಿಗರಿಗೂ ಚುರುಕು ಮುಟ್ಟಿಸುತ್ತಿದ್ದರು.

''ನಮ್ಮ ಕನ್ನಡಿಗರು ಬಹಳ ವಿಶಾಲ ಹೃದಯದವರು, ಬಾಯಿತುಂಬಾ ಮಾತನಾಡಿ ಸಂತಸ ವ್ಯಕ್ತಪಡಿಸುವವರು. ಸಾಹಿತಿಗಳನ್ನು ಮಾತಿನಲ್ಲಿ ಹಾಸ್ಯ ಚಕ್ರವರ್ತಿ, ನಗೆ ಸಾರ್ವಭೌಮ ಎಂದು ಹಾಡಿ ಹೊಗಳುವವರು. ಆದರೆ ಕೃತಿಯಲ್ಲಿ ಮರುಭೂಮಿಯಂತಹ ವಿಶಾಲ ಹೃದಯದವರು'' ಎಂದಾಗ ಯಾರಿಗೆ ತಾನೇ ಚುರುಕು ಮುಟ್ಟದಿದ್ದೀತು!

ನಾಡಿಗೇರರು ಅತಿ ಸಂತಸದಿಂದ ಹೇಳುತ್ತಿದ್ದ ಮಾತೆಂದರೆ, ''ನನ್ನ ಹುಟ್ಟು ಹಬ್ಬವನ್ನು, ಭಕ್ಷ್ಯ ಭೋಜ್ಯಗಳನ್ನು ಮಾಡಿ ಉಂಡು ನಲಿದು, ನಾಡಿಗೆ ನಾಡೇ ಆಚರಿಸುತ್ತದೆ''

ಇದನ್ನ ಕೇಳಿದವರ ಬಾಯಿ ನಾಲ್ಕು ಇಂಚು ಅಗಲವಾಗಿರುತ್ತದೆ! ''ಹೌದ್ರೀ.... ನಾನು ಹುಟ್ಟಿದ್ದು ಯುಗಾದಿಯಂದೇ!''

# ಕನ್ನಡಿ - ಗರಡಿಯಾಳು

(ಅರವತ್ತನೇ ಹುಟ್ಟುಹಬ್ಬದ ಸಂದರ್ಭದಲ್ಲಿ ವೈ.ಎನ್.ಕೆ. ಪ್ರಜಾವಾಣಿಯಲ್ಲಿ ಬರೆದ ಲೇಖನ)

**– ವೈ.ಎನ್.ಕೆ.**

''ರಾಜರತ್ನಂ ಜೇಪಿಯೆಂಬೆಂ
ಗೇಜಿನವರೆಂಅತ್ತು ಕನ್ನಡ
ಪೇಜಿನೊಳಗೊಂದೆರಡೇನೊ
ಪದ್ಯದ ಬುಕ್ಕುಗಳ ಬರೆದು...''

ಇದು 'ಎಂಗೇಜ್'ನಲ್ಲಿದ್ದ ಜಿ.ಪಿ. ರಾಜರತ್ನಂ ಬಗ್ಗೆ ರಾಜರತ್ನಂ ಕಲ್ಪಿತ ಗುಪ್ತ ಸಂಪಾದಕ ಪಂಚಕದ ಬೈಲಿಂಗ್ಯುಯಲ್ ಬಿಗ್ ಭಾರತಿ ಬರೆದ ಸಾಲುಗಳು. ಈಗ 'ಎಂಗೇಜ್' ಮೀರಿ ಷಷ್ಠಿಪೂರ್ತಿಯ ಘಟ್ಟದಲ್ಲಿದ್ದರೂ ಸಾಹಿತ್ಯ ಬರವಣಿಗೆಯ 'ಎಂಗೇಜ್‌ಮೆಂಟ್'ನಲ್ಲಿ ಸತತ ನಿರತರಾಗಿ ದುಡಿದರು.

'ಗುಂಡ್ಲು ಪಂಡಿತ'ರ ವಂಶದವರು 'ಗುಂಡು' ಪಂಡಿತರಾಗಿ (ಅರ್ಥಾತ್ ಯೆಂಡ್ಕುಡ್ಕ ರತ್ನರಾಗಿ 'ಮರಿ ಹೆಂಡ'ವಾಗಿ) ಮಾರ್ಪಡುವಾಗ 'ಅತ್ತ ರತ್ತ ರತ್ತ ರೆಂದು ಹೊತ್ತು ಮೂರು ಅಳುವೆ ನೀನು ಎಂಬ ಬಾಲಿಶ, ಅನುಕರಣೆಯ ಸಾಲುಗಳಿಂದ ಹಿಡಿದು,

'ರೆಕ್ಕೆ ಬಿಳುಪ್ನ ತೆಗೆದ್ ಎರಚ್ದಂಗೆ ಸ್ನಾನ ಮಾಡಿದ ಕೊಕ್ರೆ' ಯಲ್ಲದೆ 'ಸುತ್ತಾ ಸಾಯೋ ಬಿಸಿಲೀನ್ ಚಾಪೆ ಅಲ್ಲಲ್ಲೇ ಒಸಿ ನೆರಳೀನ್ ತೇಪೆ' ಯಂಥ ಸಾಲಿನವರೆಗೆ ಕಾವ್ಯ ಪ್ರತಿಭೆ ಪ್ರದರ್ಶನದವರೆಗಿನ ಬೆಳವಣಿಗೆ ಅಪಾರ.

## ಕ್ರಾಂತಿ ಕಹಳೆ

ಕಾವೇರಿಗೆ ಕಾಸೆಸೆದರೆ ಕೈವಲ್ಯಕ್ಕೆ ಕಾಲುಮಣೆ ಎಂದು ನಂಬಿದ್ದ ಚಿನ್ನದ ಗಂಟೆ ಚಿಕ್ಕರಂಗರಾಯರು, ಭಿಕ್ಷುಕನಿಗೆ ಕಾಸುಕೊಡದೆ ಕಾವೇರಿಗೆ ಎಂಟಾಣೆ ಹಾಕಬೇಕಾಗಿ ಬಂದ ಪ್ರಸಂಗದ ತೆಳು ವಿಡಂಬನೆಯಿಂದ ಹಿಡಿದು, ಅಭಿರಾಮತರ ಗಾನ ಹಾಡಿದ ವಿಕಾರ ಸ್ವರೂಪದ ಮುದುಕಿಯನ್ನು ಕಂಡು 'ಇಂಥ ಕೊರಳ ಕೃಷ್ಣನಿಗೆ ಇಂಥ ಗುಡಿಯನ್ನು ಕಟ್ಟಿದ ದೇವರಾದರೂ ಯಾವ ಮ್ಲೇಚ್ಛನಿಗೆ ಕಡಿಮೆ ಎಂದು ಗುಡುಗಿದ ರಾಜರತ್ನಂ, ಹರಿತದ ಲೆಕ್ಕಣಿಕೆಯನ್ನು ಬಿಸಿನೆತ್ತರಿನಲ್ಲದ್ದಿ ಬರೆದು 'ಮಸೆಯಲಿ ಕ್ರಾಂತಿಯ ಕ್ರೂರಕುಠಾರಂ' ಎಂದು 'ಗಂಡುಗೊಡಲಿ'ಯನ್ನು ಮಸೆದವರು.

ಕೈಲಿ ಕಿಸೀದೆ ಕರ್ಮಾಂತ್ ಕಿರ್ಲೊ ಕಂಜೋರ್ ಅದ್ಭಿ ಬಕ್ರ'

ಎಂದು ಕರ್ಮವಾದಿಗಳನ್ನು ಮೂದಲಿಸಿ, 'ನಾಡಿನ ಬಡವ ಸರ್ಕಸ್ ಸಿಮ್ಮ'ನಿಗೆ ಕ್ರಾಂತಿಗೆ ಕರೆಕೊಟ್ಟ ರಾಜರತ್ನಂ, ಅಹಿಂಸಾಮೂರ್ತಿ ಬುದ್ಧನಿಗೆ ಸಂಬಂಧಿಸಿದ ಸಾಹಿತ್ಯದಲ್ಲಿ ಕೈಯಾಡಿಸಿ, ಶಿಶು ಸಾಹಿತ್ಯದಲ್ಲಿ ಮಕ್ಕಳ ಬಾಯಿಯಲ್ಲಿ ನಲಿದಾಡುವ ಹತ್ತಾರು ಪದ್ಯಗಳ 'ಬಣ್ಣದ ತಗಡಿನ ತುತ್ತೂರಿ' ಯೂದಿದರು. (ಆಗಾಗ್ಗೆ 'ಗಗಗಗ ಸದ್ದನು ಮಾಡಿದರು' ಎಂದೂ ಹೇಳಬಹುದು).

'ಕರ್ನಾಟಕವೊ - ಕರ್ಣಾಟಕವೊ' ಎಂಬ 'ನ-ಣ' ವಿವಾದವೆದ್ದಾಗ 'ನೊಣ'ವನ್ನು 'ಮೆಣ' ಮಾಡಿದರೆಂದು, ಪುರುಷಸರಸ್ವತಿಯನ್ನು ಆವಾಹಿಸಿ ಕನ್ನಡಕ್ಕೇ ವಿನೂತನ ವಿಡಂಬನೆ ಸಾಹಿತ್ಯ ಒದಗಿಸಿದರು.

'ಕೌಂಗು ನೀ ನಾ ಕುರುಚಲೆನ್ನೀ ಟಾಂಗದೆದುರಿಗೆ ಬಸ್ಸು ನೀ ಕಿಂಗ್‌ಕಾಂಗ್ ನೀ ಕ್ರಿಮಿ ನಾನು ಪುಂಗವ ನೀನು, ನಾನೇನು?'

ಎಂದು 'ಪುರುಷಸರಸ್ವತಿ' ಯ ನೆಪದಲ್ಲಿ ಕುಕವಿ ನಿಂದೆಯಲ್ಲದೆ ಸಾಹಿತ್ಯ ಲೋಕದ ಒಳಹೊರಗುಗಳ ಜನ್ಮ ಜಾಲಾಡಿದರು.

'ನೂರು ಪುಟಾಣಿ' ನೂರು ಚುಟಕಗಳ, ನೂರು ಮುಕ್ತಕಗಳ ಮಾಲೆ.

'ಗುರು ಮಹಾವಾಗ್ಮಿ ಮಾತಾಡಿದರೆ ಘಂಟೆ, ಕಂಚು. ಶಿಷ್ಯರೊ ಏಳೇ - ಗೋಡೆ ನಾಲ್ಕರಜೊತೆಗೆ ಮೂರು ಬೆಂಚು.'

ಆದರೆ ಕಂಚು ಕಂಠಿಯಾದ ರಾಜರತ್ನಂ ಮಾತನಾಡಿದಾಗ ಇರುವುದು ನೂರು ಬೆಂಚು- ಅದರ ಮೇಲೆಲ್ಲ ಕಿವಿ ಅಗಲಿಸಿ ಕುಳಿತ ಶ್ರೋತೃಗಳೆ.

ಮುಕ್ತಕದಲ್ಲಿ, ಪದ್ಯದಲ್ಲಿ ಪ್ರತಿಭೆ ಮಿಂಚಿದ 'ರತ್ನನ ಪದಗಳಲ್ಲಿ', ವಿಡಂಬನೆಯಲ್ಲೇ ಮುಗಿಯಿತೇ? ಇಲ್ಲ ಮತ್ತೆ ಸಿದ್ಧವಾಗಿತ್ತು.

'ನಾ ನಾಗಮುತ್ತು

ಸಾನೆ ದಿನಾಗಿತ್ತು

ಎಡೇನೆತ್ತಿ ನಿತ್ತು'

ನಾಗನ ಪದಗಳಲ್ಲಿರುವ ಪ್ರಾಸ ಚಮತ್ಕಾರ ಪದ್ಯದ ಓಟ:

ಯಾಂಡಲ್ ಯೀಗ್ ಇಡೀಕ್ಕ

ಶೀಟ್ ಮ್ಯಾಗ್ ಮಡೀಕ್ಕ.

ಐ, ನಾಚಿಕ್ಯಾಕ್ ಮಲ್ಲಿ?

ಯಾರ್ ಔರ್ ಇಲ್ಲಿ?

ಸುತ್ತೆಲ್ಲ ತಿಂಗಳ ಮಬ್ಬು
ನನ್ನಿಲ್ಲೇ ಇಂಗೇ ತಬ್ಬು
ನೋಡಕ್ ಯಾರಿಲ್ಲ
'ರತ್ನ'ರನ್ನು ಮೆಚ್ಚಿದವರಿಗೆ ಅನಿರೀಕ್ಷಿತ ಆಶ್ಚರ್ಯ.
'ವೋಯ್ತಲ್ಲೋ ವೋಯ್ತು ನಮ್ಮಳ್ಳೀಮರ
ಪ್ಯಾಟೆ ಪಟ್ನಕ್ಕೆ ಬಂತು ಸುಡುಗಾಡು ಸೌದೇ ಬರ.

- ಇದರಲ್ಲಿ ಅವರ ಮಾಮೂಲು ಕವನಗಳಿಗೆ ಮೀರಿ, ಸಂಕೇತವಾಗಿ ವಿಜೃಂಭಿಸುವ ಅಶ್ವತ್ಥ ಮರ.

ಕಾವ್ಯದ ಪ್ರತಿಭೆ ಹೀಗೆ ಮಿಂಚಿದರೂ ಅವರದೇ ಪಂಥವಾಗುವಂತೆ ಪ್ರಭಾವ ಬೀರಲಿಲ್ಲವೇಕೆ? ಕಾರಣ ಅವರ ಸಾಹಿತ್ಯ ಶಕ್ತಿ, ಉಳಿದ ಹಿರಿಯರ ಪ್ರತಿಭೆಗೆ ಮಾರುಹೋದುದಲ್ಲದೆ, ಅದರ ಸತ್ವವನ್ನು ಇತರರಿಗೆ ಉಣಬಡಿಸುವ ಪರಿಚಾರಿಕೆಗೆ ಕಾಲವೆಲ್ಲ ಮೀಸಲಾದುದಿರಬಹುದೆ?

## ಮತ್ತೆ ಕೆರಳಲಿ

ಡಿ.ವಿ.ಜಿ., ಕೈಲಾಸಂ, ಗೋವಿಂದ ಪೈ, ಸಂಸ - ಇವರ ಸಾಹಿತ್ಯ ಪ್ರಚಾರಕ್ಕೆಲ್ಲ ತಮ್ಮ ಸರ್ವಶಕ್ತಿ ನೀಡಿದುದಲ್ಲದೆ, ಕೆ.ವಿ. ಅಯ್ಯರ್, ರಾ.ಶಿ. ಇವರಿಗೆಲ್ಲಾ ಸತತ ಉತ್ತೇಜನ ಕಾರ್ಯದಲ್ಲಿ ನಿರತರಾದುದಲ್ಲದೆ, ಮಹಾರಾಜಾ ಕಾಲೇಜ್, ಸೆಂಟ್ರಲ್ ಕಾಲೇಜ್ - ಎಲ್ಲಿದ್ದರಲ್ಲಿ ವಿದ್ಯಾರ್ಥಿಗಳನ್ನು ಕಲೆಹಾಕಿ ಅವರಿಂದ ಕಥೆ. ಕವನ, ಪ್ರಬಂಧ, ಉಪನ್ಯಾಸಗಳ ಪ್ರಕಟಣೆಗೆ ಸಿದ್ಧ.

ಹಿಂದೆ ಯೌವನದ ಮೈಕಟ್ಟಿನ ಗಂಡು ಗೊಡಲಿಯ ಈ 'ಕನ್ನಡಿ- ಗರಡಿಯಾಳು' ವಯೋಧರ್ಮದಿಂದ ಮೆದುವಾದರು ಸದಾ 'ಕನ್ನಡಿಗ- ರಡಿಯಾಳು' ಎಂಬುದು ನಿಸ್ಸಂದೇಹ.

ಇವರು ಬರೆದ ಕೃತಿಗಳನ್ನು ಪಟ್ಟಿಮಾಡುವುದು, ನೆನಪಿಡುವುದು ಸುಲಭವಲ್ಲ. 'ಇಷ್ಟೆಲ್ಲಾ ಬರೆಯುತ್ತೀರಲ್ಲ, ಇದರಿಂದ ಏನು ಬಂತು?' ಎಂಬ ಪ್ರಶ್ನೆಗೆ ಉತ್ತರ: Satisfaction (ತೃಪ್ತಿ). ಆದರೆ ಅದರಲ್ಲೆ ಬದುಕುವುದಕ್ಕಾಗುವುದಿಲ್ಲವಲ್ಲ. ಅದಕು, ಇದಕು, ಎದಕು ಅದನ್ನು ಬಳಸಿಕೊಳ್ಳುವುದಕ್ಕಾಗುವುದಿಲ್ಲವಲ್ಲ.

'ಕವಿತೆಯೊಳಾಸೆಗೆಯ್ವ ಫಲಮಾವುದೊ' ಎಂದು - ಪಂಪ ಪ್ರಶ್ನಿಸಿ, 'ಪೂಜೆ, ನೆಗಳ್ತೆ, ಲಾಭ' ಎಂದು ಉತ್ತರ ಕೊಡುತ್ತಾನೆ.

'ಪೂಜೆ ತನಗಿನಿಸಿಲ್ಲವೆಂದೆ

ನ್ರೇಜುಗೊಂಡಿಪರಂತೆ

ತದ್ರೇಜಿನಿಂದಲೆ ನ್ಯಾಸ್ತಿಯಾಗಿಪರಂತೆ

ಪೂರ್ ಓಲ್ಡ್ ಚಾಪ್'

ಎಂದು ತಮ್ಮ ಮೇಲೇ ಬರೆದು ಗೇಲಿ ಮಾಡಿಕೊಂಡಿದ್ದರು.

ಆದರೆ ಅರುವತ್ತಕ್ಕೆ ದೊರಕುವ ಪೂಜೆ, ನೆಗಳ್ತೆ (ಕೀರ್ತಿ) ಅಲ್ಲದೆ ಪಂಪ ಹೇಳಿದ 'ಲಾಭ' ಬೇರೆ ಅರ್ಥದಲ್ಲಿರಬಹುದು. ಪೂಜೆ, ನೆಗಳ್ತೆ ಯಾರೆಂದೂ, ಓದುಗರಾದ ನಮಗೆ ಒಂದು ರೀತಿಯಲ್ಲಿಯ ಸಾಹಿತ್ಯದಿಂದ ಲಾಭವಾಗಿದೆ.

My works are more of irritation than inspiration ಎನ್ನುತ್ತಾರೆ ರಾಜರತ್ನಂ. ಅರುವತ್ತಾದರೂ ಕೆರಳುವುದು ಕಡಿಮೆಯಾಗಿಲ್ಲ ಎಂದು ನಂಬಲು ಆಶೆ. ಈ ನೆತ್ತರು ಆರದಿರಲಿ ಮತ್ತೆ ಯಾರಾದರೂ ಅವರನ್ನು ಕೆಣಕಬಾರದೆ? 'ನಾಗನ ಪದ'ವನ್ನು ಮೀರಿದ ಕೃತಿ ನಮಗೆ ಬರಬಾರದೆ?

## ಭಯ

ಅಪ್ಪನ ಕಂಡರೆ<br>
ಕ್ಯಾರೇ ಇಲ್ಲ<br>
ಅಮ್ಮನದೇ ಭಯ<br>
ಪುಟ್ಟನಿಗೆ<br>
ಅಪ್ಪನ ಕೈಯಲಿ<br>
ಸದಾ ಪುಸ್ತಕ<br>
ಅಮ್ಮನ ಬಳಿ ಇದೆ<br>
ಲಟ್ಟಣಿಗೆ!

– ಎಚ್. ಡುಂಡಿರಾಜ್

ಸಂಗ್ರಹ ಕೊರವಂಜಿ



"ಏಣೀನ ಇಡೋ ಇಲ್ಲಿ, ನಾನಿಳೀಬೇಕು.
ಇಡ್ತೀಯೋ ಇಳ್ದ್ ಬಂದು ಒದೀಲೋ...."

# ಮೇನಕಾ ಲಚ್‌ಮನ್‌ಸೀ - ಒಂದು ಹಗರಣ

– ಸಿ.ಆರ್. ಸತ್ಯ

ಈಚೀಚೆಗೆ ನಡೆಯುತ್ತಿರುವ ಅಮೇರಿಕದ ಅಧ್ಯಕ್ಷ ಬಿಲ್‌ಕ್ಲಿಂಟನ್ - ಮೋನಿಕಾ ಲೆವಿನ್‌ಸ್ಕಿ ಇವರ ನಡುವಣ ಚೆಲ್ಲಾಟ, ಪ್ರಪಂಚಾದ್ಯಂತ ಅದರ ಪ್ರಸಾರ ಹಾಗೂ ಅದರ ಬಗ್ಗೆ ವಿಶ್ಲೇಷಣೆ, ಇವೆಲ್ಲಾ ಟೀವಿಯಲ್ಲಿ ನಿಮ್ಮ ಕಣ್ಣಿಗೂ ಬಿದ್ದಿರಬಹುದು. ಬಹುಶಃ ನೀವು ಆ ಕಾರ್ಯಕ್ರಮವನ್ನು ಆಗಾಗ್ಗೆ ಕದ್ದು ನೋಡಿಯೂ ಇರಬಹುದು, ಕ್ಲಿಂಟನ್ ತನ್ನ ಕಾರ್ಯವನ್ನು Grand jury ಮುಂದೆ ತನ್ನದು ಯಾವ ತಪ್ಪೂ ಇಲ್ಲಾ ಅಂತ ನಾಲ್ಕು ಘಂಟೆಗಳ ಕಾಲ (ಬೆವರು ಸುರಿಸುತ್ತಾ) ನೀರು ಕುಡಿಯುತ್ತಾ ಸಾಧಿಸಿ ಕೊಂಡಿದ್ದನ್ನು, ನಾನೂ ನನ್ನ ಹೆಂಡತಿ ಒಟ್ಟಿಗೇನೆ watch ಮಾಡಿದ್ವಿ, ಆ ಹಗರಣ ಮುಗಿದ ತಕ್ಷಣ ನನಗೆ ಯಾಕೋ ಏನೋ ಕ್ಲಿಂಟನ್ ಬಗ್ಗೆ ಒಂದು ರೀತಿಯ ಅನುಕಂಪ ಉಕ್ಕಿ ಬಂತು.

"ಅವನೇನು ತಪ್ಪು ಮಾಡಿದಾ ಅಂತ ಆ ದೇಶದ ಜನ ಅವನನ್ನು ಗೋಳು ಹೊಯ್ಕೋತಾರೆ? ಅಯ್ಯೋ ಪಾಪ!" ಅಂದೆ.

ತಕ್ಷಣ ನನ್ನ ಹೆಂಡತಿ ಚಟ್! ಅಂತ ಕಾಳೀ ರೂಪ ತಾಳಿ

"ಏನ್ರೀ ಹಾಗಂದ್ರೆ?" ಅಂತ ಗರ್ಜಿಸಿದಳು.

ಕ್ಲಿಂಟನ್ ತರಹ ನಾನೂ ಸ್ವಲ್ಪ ಬೆವರೊಕ್ಕೆ ಶುರುಮಾಡಿದೆ.

"ಅ-ಅಲ್ಲ-ಕಣೇ, ಆ ವೈಟ್ ಹೌಸ್‌ನಲ್ಲಿ ನಡೆದಿದ್ದು ಏನು ಮಹಾ ದೊಡ್ಡ ವಿಷಯ ಅಂತ ಅವನನ್ನ ಸತಾಯಿಸ್ತಾ ಇದ್ದಾರೆ ಅಂತ ನಾ ಕೇಳಿದ್ದು. ಪ್ರಪಂಚದಲ್ಲಿ ಇಂತಹ ಘಟನೆಗಳು ಎಲ್ಲಾ ಆಫೀಸ್‌ಗಳಲ್ಲಿ ಪ್ರತಿ ದಿನಾ ನಡೆಯೋದೇನೆ!" ಅಂತ ಉಸುರಿದೆ. (ನಾನು ಮದುವೆ ಆದಮೇಲೆ ಈ ತರಹ long statements ಕೊಡೋದು ಬಹಳ ಅಪರೂಪ)

"ಏನಂದ್ರೀ?" ಅಂತ ಅವಳು ಇನ್ನೊಂದು ಗರ್ಜನೆ ಕೊಟ್ಟಳು. ನಾನು ಬೆವತುಕೊಳ್ಳೋದರ ಜೊತೆಗೆ ಸ್ವಲ್ಪ ನಡುಗೋದಕ್ಕೂ ಶುರುಮಾಡಿದೆ.

"ಏ-ಏನಿಲ್ಲ, ಬಿಡು" ಅಂತ ಮಾತನ್ನ ತೇಲಿಸೋಕ್ಕೆ ಹೋದೆ. ಆದರೆ ಅವಳು ಬಿಡಬೇಕೆ?

''ಸ್ವಲ್ಪ ನೆಟ್ಟಗೆ ಕೂತ್ಕೊಂಡು ನನ್ನ ಕಡೇನೆ ನೇರವಾಗಿ ನೋಡಿ. ನಾ ಹೇಳಿದ್ದಕ್ಕೆ ಉತ್ತರ ಕೊಡಿ'' ಅಂತ ಹುಕುಂ ಮಾಡಿದಳು.

''ಎಸ್, ಮ್ಯಾಡಂ''

''ಇಂತಹಾ ಘಟನೆಗಳು ಎಲ್ಲಾ ಆಫೀಸಿನಲ್ಲೂ ಪ್ರತೀದಿನಾ ನಡೆಯೋದೆ ಅಂತ ಅಲ್ಲವೇ ನೀವು ಹೇಳಿದ್ದು?''

''ಎಸ್, ಮ್ಯಾಡಂ''

''ಅದರ ಅರ್ಥ, ನಿಮ್ಮ ಆಫೀಸಿನಲ್ಲೂ ಇದೇ ತರಹ ನಡೆಯುತ್ತದೆ ಅಂತ ತಾನೇ?''

''ಎಸ್, ಮ್ಯಾಡಂ, ನೋ! ನೋ!! ಮ್ಯಾಡಂ!''

''ನಿಮ್ಮ ಸೆಕ್ರೆಟರಿ ಹೆಸರು ಏನ್ರೀ?''

''ಮೇನಕಾ ಲಚ್‌ಮನ್‌ಸೀ''

''ಅದೇನು, ಅವಳ ಹೆಸರು ಮೋನಿಕಾ ಲೆವಿನ್ಸ್ಕೀ ಹೆಸರೂ ಒಂದೇ ತರಹ ಇದೆ?''

''ನನ್ಗೇನು ಗೊತ್ತೆ? ಅವಳ ಅಪ್ಪ ಅಮ್ಮನ್ನ ಕೇಳು''

''ಅವಳು ಯಾವ ಜಾತಿರೀ?''

''ಸಿಂಧಿ ಅಂತ ಕಾಣುತ್ತೆ''

''ಓಹೋ ಎಲ್ಲಾ ಡೀಟೈಲ್ಲೂ ಬಾಯ್ನಲ್ಲೇ ಇದೆ. ನೊಡೋಕ್ಕೆ ಚೆನ್ನಾಗಿದ್ದಾಳಾ?''

''ಓ.ಕೆ. ಅನ್ನಬಹುದು''

''ಸಧ್ಯ ಟೆರ್ರಿಫಿಕ್! ಅಂತ ಅನ್ನಲಿಲ್ಲವಲ್ಲ ಥ್ಯಾಂಕ್ಸ್.''

''ಅಲ್ಲವೇ, ಈ ಮೇನಕಾ ಲಚ್‌ಮನ್‌ಸೀಗೂ ನನಗೂನೂ ಏನು ಸಂಬಂಧ ಇದೆ ಅಂತ ನನ್ನನ್ನ ಹೀಗೆ ಪ್ರಶ್ನಿಸ್ತಾ ಇದ್ದೀ?''

''ಸಂಬಂಧಾನಾ? ಹೇಳ್ತೀನಿ ಇನ್ನೊಂದು ಸ್ವಲ್ಪ ಹೊತ್ತಿಗೆ. ಆಫೀಸಿನಲ್ಲಿ ನೀವು ಓವರ್ ಟೈಮ್ ಅಂತ ನಿಂತಿರ್‍ತೀರಲ್ಲಾ ಆ ಸಮಯದಲ್ಲಿ ಅವಳೂ ಯಾವತ್ತಾದರೋ ಇರ್‍ತಾಳೇನ್ರೀ?''

''ಯಾವಾಗಲೋ ಆವಾಗಾವಾಗ ಇದ್ದರೂ ಇದ್ದಿರಬಹುದು ಕಣೆ. ಅದರಲ್ಲೇನು ತಪ್ಪು ಅಂತೀನಿ. office work is God's work ಅಂತ ಕೆಂಗಲ್ ಹನುಮಂತಯ್ಯನವರು ವಿಧಾನಸೌಧ....''

''ಅವಳು ನಿಮಗ್ಯಾವಾಗಲಾದರೂ ನೆಕ್ ಟೈ ಪ್ರೆಸೆಂಟ್ ಮಾಡಿದಾಳೇನ್ರೀ? ಮೊನ್ನೆ ಬೆಳಿಗ್ಗೆ ನೀವು ಆ ಟೈ ಜೊತೆ ಏನೋ ಮಾತಾಡ್ತಾ ಇದ್ದಾಗೆ ಇತ್ತು.''

''ಅಯ್ಯೋ ರಾಮ, ಯಾರಾದ್ರೂ ಟೈ ಜೊತೆ ಮಾತಾಡ್ತಾರೇನೇ? ಅದರ ಮೇಲೆ ಕಾಫೀ ಕರೆ ಆಗಿತ್ತು. ಅದಕ್ಕೆ ನನ್ನನ್ನೆ ನಾನೇ ಬಯ್ಕೋತಿದ್ದೆ''

ಈ ಸ್ಟೇಜ್ ಬಂದಾಗ ನನ್ನ ಹೆಂಡತಿಗೆ ಸಿಕ್ಕಾಪಟ್ಟೆ ಕೋಪ ಏರೋಗ್ಬಿತ್ತು. ತಕ್ಷಣ ಫೋನ್ ಹತ್ರ ಹೋಗಿ ಟಕ್ ಟಕ್ ಟಕ್ ಅಂತ ಯಾವುದೋ ನಂಬರ್ ಒತ್ತಿದಳು. ಆ ಕಡೆಯಿಂದ ಯಾರೋ ರಿಪ್ಲೈಮಾಡಿದ್ರು.

ನನ್ನ ಹೆಂಡ್ತಿ, ''ನಮಸ್ಕಾರ ಲಾಯರ್ ಮಹಾಪತಿಗಳೇ! ಹುಷಾರಾಗಿದೀರಾ? ಹೆಂಡ್ತಿ ಮಕ್ಕಳು ಹೇಗಿದ್ದಾರೆ?.. ಹೌದು ಹೌದು ತುಂಬಾ ದಿವಸ ಆಯ್ತು ನಿಮ್ಮನ್ನ ಮಾತಾಡ್ಸಿ... ಯಾರು?? ಓ, ನನ್ನ ಯಜಮಾನ್ರ?... ಅವರಿಗೇನು ಆಗಿದೆ ಸಧ್ಯ! ಆರೋಗ್ಯವಾಗಿ ಸ್ವಲ್ಪ ಜಾಸ್ತಿ ಚಟುವಟಿಕೆಯಿಂದಲೇ ಇದ್ದಾರೆ ಈಚೀಚೆಗೆ. ಅದರ ಬಗ್ಗೇನೆ ನಿಮ್ಹತ್ರ ಹೇಳೋದು ತುಂಬಾ ಇದೆ. Urgent case ಉ. ತಕ್ಷಣ ನಮ್ಮನೆಗೆ ಬರೋಕ್ಕೆ ಆಗುತ್ತೆ?'' ಅಂತ ಕೇಳಿದಳು.

ಈ ಮಹಾಪತಿ ಅನ್ನೋ ಲಾಯರ್‌ಗೆ ಕಸ್ಟಮರ್ ಸಿಗೋದು ಅಪರೂಪ. ಇಂತಹಾ ಫೋನ್ ಕಾಲ್ ಬಂದ್ರೆ ಬಿಡ್ತಾನೆಯೆ? ತಕ್ಷಣ ಮನೆಗೆ ಬಂದು ಇಳಿದ. ಕೋರ್ಟಿನಲ್ಲಿ, ಸುತ್ತ ಮುತ್ತ ಕಕ್ಷಿಗಳು, ಲಾಯರ್ ದೋಸ್ತುಗಳು ಹಾಗೂ ಜಡ್ಜ್‌ಗಳು ಈ ಮಾಹಪತೀನ ''ಡಾಬರ್ ಮ್ಯಾನ್'' ಅಂತ ಕರೀತಾರೆ. ಅವನಿಗೆ ಕೋಪ ಜಾಸ್ತಿ ಅಂತೆ. ನಾಯಿ ತರಹಾನೇ ಬೊಗಳಿ ಕಚ್ಚೇಬಿಡ್ತಾನೆ ಅಂತ ಪ್ರತೀತಿ.

ಈ ಮಹಾಪತೀ ಲಾಯರ್ರೂ, ನನ್ನ ಹೆಂಡ್ತೀನೂ ವರಾಂಡದಲ್ಲೇ ಅದೇನೋ ಇಪ್ಪತ್ತು ನಿಮಿಷ ಗುಸಗುಸ ಅಂತ ಮಾತಾಡ್ತ ಇದ್ದರು. ಆಮೇಲೆ, ಲಾಯರ್ರು ನನ್ನನ್ನ ಅಲ್ಲಿಗೇ ಕರೆದ. ಡಾಬರ್ ಮ್ಯಾನ್ ಮುಂದೆ ಹೋಗಿ ಕೂತೆ. ಎದೆ ಡವ ಡವ ಅಂತಾ ಹೊಡ್ಕೊಳ್ಳಕ್ಕೆ ಶುರುವಾಯ್ತು. ಗಂಡಲು ಸರಿಮಾಡಿಕೊಂಡು ಡಾಬರ್ ಮ್ಯಾನ್, ''ರೀ ಮಿಸ್ಟರ್ ಪೆದ್ದಣ್ಣನವರೇ, (by the way. ಇದು ನನ್ನ ಅಪ್ಪ ಅಮ್ಮ ಇಟ್ಟಿದ ಹೆಸರು. ಅದ್ಯಾಕೆ ಹಾಗೆ ಇಟ್ಟರು ಅಂತ ನನ್ನ ಕೇಳಬೇಡಿ) ನಿಮ್ಮ ಶ್ರೀಮತಿಯವರು ನಿಮ್ಮ ಮೇಲೆ ಒಂದು ಸೀರಿಯಸ್ ಕೋರ್ಟ್ ಕೇಸ್ ಹಾಕೋದಕ್ಕೆ ನನ್ನನ್ನು ನೇಮಿಸಿಕೊಂಡಿದ್ದಾರೆ. ನಿಮ್ಮ ದೃಷ್ಟಿಯಿಂದ ನೋಡಿದರೆ, ಕೇಸ್ ಈಸ್ ವೆರ್ರಿ ವೆರ್ರಿ ಹೋಪ್‌ಲೆಸ್! ಅಂತ ಅಂದ.

''ನನ್ನ ಮೇಲೆ ಏನು ಅವಳ ಚಾರ್ಜು?'' ಅಂತ ಕೇಳಿದೆ. ''ಅದು ಕೋರ್ಟ್ ಮೂಲಕ ತಿಳಿಯುತ್ತೆ ಮಿ. ಪೆದ್ದಣ್ಣ. ಆದರೂ ಬ್ರೀಫ್ ಆಗಿ ಹೇಳ್ತೀನಿ ಕೇಳಿ. ಇದು ನಿಮಗೂ ಮೇನಕಾ ಲಚ್‌ಮನ್‌ಸಿಗೂ ಸಂಬಂಧ ಪಟ್ಟಿದ್ದು. ಆಫೀಸ್

ವ್ಯವಹಾರ'' ಅಂತ ಅಂದ. ನನಗೆ ಗಾಬರಿ ಆಯ್ತು.'' ಸಂಬಂಧ ಅಂತೆ ಸಂಬಂಧ. ರ್‍ಯಾಸ್ಕಲ್! ಅವಳು ಹೇಳ್ತಾಳೆ ಅಂತ ನೀನೊಬ್ಬ ಬಂದ್ಬುಟ್ಟೆ, ಮಹಾ ನ್ಯಾಯವಾದಿ! ಅಂತ ರೇಗಿದೆ.

''ಅದೆಲ್ಲಾ ಜಡ್ಜ್‌ಮುಂದೆ ಹೇಳಿ'' ಅಂತ ಕೆಟ್ಟ ನಗೆ ಬಿಟ್ಟ ಆ ಡಾಬರ್ ಮ್ಯಾನ್. ನನ್ನ ಹೆಂಡತಿ ಕಡೆ ನೋಡಿದೆ. ಒಳ್ಳೇ ಕಲ್ಲು ಬಂಡೆ ತರಹ ನಿಂತಿದ್ಳು, ''ನಾನು ಮೊದಲೇ ಹೇಳಿದೆನಲ್ಲಾ, ಇಟ್ ಇಸ್ ಎ ವೆರ್‍ರಿ ವೆರ್‍ರಿ ಹೋಪ್‌ಲೆಸ್ ಕೇಸ್ ಫಾರ್ ಯೂ'' ಅಂತ ಕರಿ ನಾಯಿ ಬೊಗಳ್ತು.

''ಫಸ್ಟ್ ಹಿಯರಿಂಗ್‌ನ ಯಾವುದಾದರೂ ಶನಿವಾರ ಫಿಕ್ಸ್ ಮಾಡಿ ಮಹಾಪತಿಗಳೇ ಇವರ ಫ್ರೆಂಡ್ಸೂ, ಸಂಬಂಧಿಗಳೆಲ್ಲರ್ರೂ ಅಲ್ಲಿಗೆ ಬರೋಕ್ಕೆ ಇನ್‌ವಿಟೇಷನ್ ಕೊಡ್ತೀನಿ'' ಅಂತ ನನ್ನ ಹೆಂಡ್ತಿ ಡಾಬರ್ ಮ್ಯಾನ್‌ಗೆ ಹೇಳಿದಳು.

ಅಯ್ಯೋ ದೇವರೆ ಅಂದ್ಕೊಂಡೆ. ಇದರಿಂದ ನನಗೆ ಪಾರೇ ಇಲ್ಲವೆ? ಅಂತ ಪೇಚಾಟ್ಕೊಂಡೆ. ಅಷ್ಟರಲ್ಲಿ ಮಹಾಪತಿ

''ಮಿ. ಪೆದ್ದಣ್ಣ ಯುವರ್ ವೈಫ್ ಡಸ್ ನಾಟ್ ಮೈಂಡ್ out of court settlement! ಅಂತ ಕೊಕ್ಕೆ ಹಾಕಿದ.

''ಹೌದೆ?'' ಅಂದೆ ನಾನು, ಪೆದ್ದಾಗಿ.

''ಎಸ್'' ಅಂತ ನನ್ನ ಹೆಂಡತಿ ಅನುಮೋದಿಸಿದಳು.

''ಏನು ನಿನ್ನ terms?'' ಅಂತ ಕೇಳಿದೆ.

ಡಾಬರ್ ಮ್ಯಾನ್ ಈಗ ಮೂಗು ಹಾಕಿದ. ''ನಿಮ್ಮ ಶ್ರೀಮತಿಯವರು ನನ್ನ ಹತ್ತಿರ ಆ ಲಿಸ್ಟ್ ಕೊಟ್ಟಿದ್ದಾರೆ. ಓದಲೇ?'' ಅಂತ ಕೇಳಿದ.

''ಓದಿ'' ಅಂದೆ ವೀಕಾಗಿ.

ಗಂಟಲು ಸರಿಮಾಡಿಕೊಂಡು ಮಹಾಪತಿ ಲಿಸ್ಟ್ ಓದಿದ

- ಹೋದ ವರ್ಷದ ಗೌರೀಹಬ್ಬದ್ದೂ ಸೇರಿ, ಎರಡು ಸಿಲ್ಕ್ ಸ್ಯಾರಿಸ್
- Exchange ಮೇಳಾದಲ್ಲಿ ಮೋರ್ ಪವರ್‌ಫುಲ್ ವಾಷಿಂಗ್‌ಮೆಶೀನ್
- ಅವರ ಅಪ್ಪ ಅಮ್ಮನ್ನ ನಿಮ್ಮನೇಲಿ ಆರು ತಿಂಗಳು ಇಟ್ಕೊಳ್ಳೋದು.
- ಅವರ ಕೈನಲ್ಲಿ ಇರೋ ಎರಡು ಗ್ರಾಮ್ ಬಳೆಗಳನ್ನು ಕರಗಿಸಿ ಮೇಲೆ ಎರಡು ಸವರನ್ ಚಿನ್ನಹಾಕಿ, ನೆಕ್‌ಲೆಸ್ ಮಾಡಿಸೋದು.
- ನಿಮ್ಮ 'ದರಿದ್ರ' ಟೈನ ಎಸೆದು ಸಾರಿಸೋ ಬಟ್ಟೆ ಮಾಡೋದು.
- ಮಹಾಪತೀಗೆ ಕೇವಲ ಸಾವಿರ ರೂಪಾಯಿ ಫೀಸ್ ಕೊಡೋದು (ಈ

Condition ನ ಮಹಾಪತಿ ಸ್ವಲ್ಪ ಜೋರಾಗೇ ಓದಿದ)

ನಾನು ಧೈರ್ಯದಿಂದಲೇ ಎಲ್ಲಾ ಕೇಳಿದೆ. ''ನಾನು ಈ termsಗೆ ಒಪ್ಪಿಕೊಂಡರೆ ನೀವು ಕೇಸ್ ಡ್ರಾಪ್ ಮಾಡೋದು ಖಂಡಿತಾ ತಾನೆ?'' ಅಂತ ಖಚಿತ ಮಾಡ್ಕೊಂಡೆ.

''ಎಸ್'' ಅಂತ ನನ್ನ ಹೆಂಡತಿ ಒಪ್ಪಿದಳು.

''ಎಸ್, Including last Condition'' ಅಂತ ಡಾಬರ್ ಮ್ಯಾನ್‌ನೂ ಒಪ್ಪಿಕೊಂಡ.

ನಾನು ಸ್ವಲ್ಪ Quick thinking ಮಾಡ್ದೆ. ''ನೋಪ್ರಾಬ್ಲಮ್, ಐ ಅಗ್ರೀ'' ಅಂತ ಅಂದೆ. ಇಬ್ಬರ ಮುಖದಲ್ಲೂ ಸಂತೋಷ ಉಕ್ಕಿ ಬಂತು. ''ಬೇರೆ ಇನ್ನೇನೂ ಕಂಡೀಶನ್‌ಗಳು ಇಲ್ಲಾತಾನೆ?'' ಅಂದೆ.

''ನೋಮೋರ್'' ಅಂತ ನನ್ನ ಹೆಂಡತಿ, ಡಾಬರ್ ಮ್ಯಾನ್ ಒಪ್ಪಿಗೆ ಕೊಟ್ರು. ಅಷ್ಟು ಹೊತ್ತಿಗೆ ಫೋನ್ ರಿಂಗ್ ಆಯ್ತು. ನನ್ನ ಹೆಂಡತಿ ರಿಸೀವರ್‌ನಲ್ಲಿ ಮಾತಾಡಿ ''ರೀ, ನಿಮ್ಮ ಆಫೀಸಿನಿಂದ ಮೇನಕಾ ಲಚ್‌ಮನ್‌ನೇ ಮಾಡ್ತಿದಾಳೆ'' ಅಂತ ಫೋನ್ ಕೊಟ್ಟಳು. ನಾನು ಫೋನಿನಲ್ಲಿ ಮಾತಾಡಿ ತಕ್ಷಣ ಬಟ್ಟೆ ಹಾಕ್ಕೊಂಡು ಹೊರಗೆ ಹೊರಡೋಕ್ಕೆ ರೆಡಿಯಾಗಿ ನಿಂತೆ.

''ಎಲ್ಲಿಗೆ ಹೋಗ್ತಿರ್ರೀ?'' ಅಂತ ಕೇಳಿದಳು ನನ್ನ ಹೆಂಡ್ತಿ. ಆಫೀಸ್‌ನಲ್ಲಿ ಓವರ್ ಟೈಮ್ ಕೆಲಸ ಇದೆ ಡಿಯರ್, ಗುಡ್‌ಬೈ!'' ಅಂತ ತಕ್ಷಣ ಜಾರಿಕೊಂಡೆ.

ನನ್ನ ಹೆಂಡತಿ ಬಾಯಿ, ಆ ಡಾಬರ್ ಮ್ಯಾನ್ ಬಾಯಿ ದೊಡ್ಡದಾಗಿ ತೆಕ್ಕೊಂಡಿತ್ತು!

## ಥಳುಕು - ತುಣುಕು

ಜನನಾಯಕರು - ಏನ್ರೀ ನಿಮ್ಮ ಪೇಪರಿಗೆ ನನ್ನ ಮೇಲೆ ದ್ವೇಷ ಅಂತ ಕಾಣುತ್ತೆ

ಸಂ - ಛೇ! ಛೇ! ಹಾಗ್ಯಾಕಂತೀರಿ

ಜ.ನಾ. - ನನ್ನ ಭಾಷಣವನ್ನು ಪ್ರಚಾರಪಡಿಸಿಲ್ಲ

ಸಂ - ಅದರಿಂದಾನೇ ಗೊತ್ತಾಗುಲ್ವೆ ಸಾರ್, ನಿಮ್ಮ ಮೇಲೆ ದ್ವೇಷ ಇಲ್ಲ ಅಂತ.

## ವ್ಯಂಗ್ಯ ಪ್ರಪಂಚ



"ಏನೋ, ನಿಮ್ತಂದೆ ಹೇಳಿದ್ಮಾತೇ ಕೇಳೋದಿಲ್ವಂತೆ?"
"ಹೌದು ಸಾರ್, ಸ್ವಲ್ಪಾನೂ ಕೇಳೋದಿಲ್ಲ ಅವರು. ಬೆಳಗ್ಗೆ ಸ್ಕೂಲಿಗೆ ಹೋಗೋಲ್ಲಾಂದೆ. ಹೋಗ್ಲೇಬೇಕು ಅಂತ ಹಠ ಹಿಡಿದ್ರು"

# ನಾ ಕಂಡ ಯಂಡ್ಕುಡ್ಕ ರತ್ನ

– ಬೇಲೂರು ರಾಮಮೂರ್ತಿ

ನಾನು ಎಪ್ಪತ್ಮೂರ್ರ್ನೆ ಇಸ್ವಿಯಿಂದ ಸ್ವಲ್ಪ್ ವರ್ಷ ಮಲ್ಲೇಶ್ವರದ್ ವೆಸ್ಟ್‌ಪಾರ್ಕ್ ರೋಡಲ್ಲಿದ್ದೆ. ಬೆಳಗ್ಗೆ ಕೆಲ್ಸಕ್ ಹೋಗುವಾಗ, ಸಂಜೆ ಕೆಲ್ಸ್‌ದಿಂದ ಹಿಂದಕ್ ಬರುವಾಗ ರತ್ನನ್ ದರ್ಶನ ಆಗ್ತಿತ್ತು. ಬಿಳಿ ಪಂಚೆ, ಜುಬ್ಬ ಹೆಗಲಿಗೊಂದ್ ಬ್ಯಾಗು, ಹಾಕ್ಕೊಂಡ್ ನಡೀತಾ ಇದ್ ರತ್ನನ್ನ ಕಣ್ತುಂಬ ನೋಡ್ತಿದ್ದೆ. ಆದ್ರೆ ನಿಜ ಯೇಳ್ಬೇಕೂಂದ್ರೆ ಈ ಮಆತ್ಮನೇ ರಾಜರತ್ನಂ ಅಂತ ಗೊತ್ತಾಗಿದ್ದೇ ತುಂಬಾ ದಿನ ಆದ್ಮೇಲೆ. ಅವರ್ನ್ ನೋಡ್ತಿದ್ದಾಗ ಇವ್ರು ಯಾರೋ ದೊಡ್ಮನಸ್ರು, ಮಆತ್ಮರು ಅಂತ ಅನಿಸ್ತಿತ್ತೇ ಹೊರ್ತು ''ರತ್ನನ್ ಪದಗಳ್ನ್'' ಬರ್ದ, ''ನಾಗನ ಪದಗಳ್ನ್'' ಬರ್ದ, ''ಪುರುಷ ಸರಸ್ವತಿ'' ಬರ್ದ ಮಆಪುರುಷ ಇವರೇ ಅಂತ ಗೊತ್ತಿರ್ಲಿಲ್ಲ. ಒಂದಿನ ನನ್ನ ಸ್ನೇಹಿತ್ರೊಬ್ರು ಎಂಟ್ನೇ ಕ್ರಾಸ್ ಬಳಿ ಇರೋ ಪೇಪರ್ ಅಂಗ್ಡೀಲಿ ನಿಂತಿದ್ರು. ನಾನೂ ಅದೇ ಅಂಗ್ಡೀಲಿ ದಿನಾ ಪೇಪರ್ ತಗೊಂಡು ಆಫೀಸಿಗೆ ಹೋಗೋ ದಾರೀಲಿ ನಡೀತಾ ಓದ್ಕೊಂಡ್ ಹೋಗ್ತಿದ್ದೆ. ಒಂದಿನ ಪೇಪರ್ ತಗೊಳುವಾಗ ಆ ಸ್ನೇಹಿತ್ರು ನನ್ನನ್ನ ಮಾತಾಡಿಸ್ತಾ ನಿಂತ್ಕೊಂಡ್ರು. ಆಗ ರಾಜರತ್ನಂ ಅವರು ಆ ಕಡೇನೇ ಬರ್ತಿದ್ರು. ನನ್ ಸ್ನೇಹಿತ್ರು. ''ನೋಡು ಅವ್ರೇ ರಾಜರತ್ನಂ... ಬಣ್ಣದ ತಗಡಿನ ತತ್ತೂರಿ ಬರ್ದೋರು'' ಅಂದ್ರು. ಆಗ ನಂಗೆ ಒಂದ್ ಕ್ಷಣ ಏನ್ ಮಾಡ್ಬೇಕು ಅಂತ್ಲೇ ಗೊತ್ತಾಗಿಲ್ಲ. ಅರೇ ಇಷ್ಟ್ ದಿವ್ಸದಿಂದ ಇವ್ರ್‌ನ್ ನೋಡ್ಕೊಂಡೇ ಬಂದೆ. ಆದ್ರೆ ಇವ್ರೇ ರಾಜರತ್ನಂ ಅಂತ ಗೊತ್ತಾಗ್ಲಿಲ್ಲ ಅನ್ಸಿ ತುಂಬಾ ಬೇಜಾರಾಯ್ತು. ಆಗ್ಲೇ ಆ ಕ್ಷಣವೇ ಅವ್ರನ್ ಮಾತಾಡಿಸ್ಬೇಕು ಅಂತ ಹೊರ್ಟೆ. ಅಷ್ಟ್ರಲ್ಲಿ ಅವ್ರಿಗೆ ಯಾರೋ ಮಾತಿಗೆ ಸಿಕ್ಕಿ ಹೆಜ್ಜೆ ಹಾಕೇ ಬಿಟ್ರು. ನಂಗೂ ಕೆಲ್ಸಕ್ಕೆ ಹೊತ್ ಆಗುತ್ತೆ ಅಂತ ಹೊರ್ಟ್‌ಬಿಟ್ಟೆ. ಆದ್ರೆ ಅವ್ರ್‌ನ್ ಮಾತಾಡಿಸ್ಬೇಕು ಅಂತ ಆಸೆ ವಿಪರೀತ ಆಗಿತ್ತು. ಆದ್ರೆ ಮನೆಗೆ ಹೋಗೋ ಧೈರ್ಯ ಇರ್ಲಿಲ್ಲ.

ಒಂದ್ ಮೂರ್ನಾಲ್ಕ್ ದಿನ ಆಗಿರ್‌ಬೌದು... ಒಂದಿನ ಸಂಜೆ ರಾಜರತ್ನಂ ಅವ್ರು ಮಾರ್ಗೋಸ ರೋಡಲ್ಲಿ ಓಗ್ತಿದ್ರು. ಬಹುಶಃ ಗಾಂಧಿ ಸಾಹಿತ್ಯ ಸಂಘದಿಂದ ಮನೆಗೆ ಓಗ್ತಿದ್ರೋ ಏನೋ ಅದೇ ಬಿಳಿ ಪಂಚೆ, ಬಿಳಿ ಜುಬ್ಬ, ಹೆಗಲ ಮೇಲೊಂದ್ ಚೀಲ, ಅದರ ತುಂಬಾ ಪುಸ್ತಕಗಳು, ನಾನು ಹಿಂದೆನೇ ಓದೆ... ಅವ್ರ ಹತ್ರ ಓದಾಗ... ಎಂಗಪ್ಪ ಇವ್ರನ್ ಮಾತಾಡ್ಸೋದು ಅಂತ ಎದೆ ಡವ ಡವ ಒಡ್ಕೊಂಡ್ತು. ಆದ್ರೂ ಬಹಳ ದಿವ್ಸದಿಂದ್ ಕಾಯ್ತಿದ್ ಛಾನ್ಸು ಅವತ್ ಸಿಕ್ತು. ಅಂಥಾ ಅವಕಾಶನ ಯಾರಾರೂ ಕಳ್ಕತಾರಾ ಅಂತ ಹಿಂದ್ ಹಿಂದ್‌ನೇ ಹೋಗಿ,

ಅವ್ರ ಪಕ್ಕಕ್ ಬಂದು, ಅವ್ರ ಜೊತೆಗೇ ನಡ್ದೆ. ನಂತ್ರ ಕೈ ಜೋಡ್ಸಿ ನಮಸ್ಕಾರ ಸಾರ್ ಅಂದೆ. ನನ್ ಮಾತ್ ಕೇಳಿ ಹಂಗೇ ನಿಂತ್ರು ನನ್ ಕಡೆ ನೋಡಿದ್ರು. ಇದ್ಯಾರೂ ಒಸ ಹುಡ್ಗ ಅಂತ ಅವ್ರಿಗೆ ಆಶ್ಚರ್ಯ ಆಗಿರ್‌ಬೌದು. ಆದ್ರೂ ಮುಖ್ದಲ್ಲಿ ನಗು ತಂದ್‌ಕೊಂಡ್ರು. ಅದೇ ಸೌಜನ್ಯದಿಂದ ''ನಮಸ್ಕಾರ... ಯಾರ್ ನೀವು. ಪರಿಚಯ ಆಗ್ಲಿಲ್ಲ'' ಅಂದ್ರು. ನಾನು ''ನನ್ ಹೆಸ್ರು ಬೇಲೂರು ರಾಮಮೂರ್ತಿ ಅಂತ. ಇತ್ತೀಚಿಗೆ ಬರೆಯೋಕೆ ಷುರು ಮಾಡಿದೀನಿ. ಒಂದಿಷ್ಟು ಕಥೆಗಳು ಪ್ರಜಾವಾಣಿ, ಸುಧಾ. ಇವುಗಳಲ್ಲಿ ಬಂದಿದೆ'' ಅಂದೆ. ''ಸಂತೋಷ..' ಅಂದು ಬೆನ್ನು ತಟ್ಟಿದ್ರು. ನಾನೋದಿದ ಅವರ ಪುಸ್ತಕಗಳ ವಿಚಾರ ಮಾತಾಡ್ಬೇಕು ಅಂತ ಮನಸ್ಸು ಹಾತೊರೀತಿತ್ತು. ಆದರೆ ಅಂಥಾ ಮಹಾತ್ಮರ ಕೃತಿರಚನೆ ಬಗ್ಗೆ ನಾನೇನು ಹೇಳೋದು ಅಂತ ಹಿಂದೇಟು ಹಾಕ್ತಿದ್ದೆ. ಆದ್ರೂ ಒಂದ್ ಮಾತಾಡ್ಬೇಕಲ್ಲ ಅಂತ 'ಸಾರ್... ನಿಮ್ಮ ಕೆಲವು ಪುಸ್ತಕಗಳನ್ನ ಓದಿದೀನಿ. ಅದ್ರಲ್ಲೂ ರತ್ನನ ಪದಗಳು... ಆಮೇಲೆ ನಿಮ್ಮ ಮಕ್ಕಳ ಸಾಹಿತ್ಯ ತುಂಬಾ ಚನ್ನಾಗಿದೆ' ಅಂದೆ. ನಕ್ರು. ಎರಡ್ಹೆಜ್ಜೆ ಹಾಕಿದ್ರು. ಹಾಗೇ ನನ್ನ ಊರು, ತಂದೆ ತಾಯಿ, ಕೆಲಸ ಎಲ್ಲ ಕೇಳಿ ತಿಳ್ಕೊಂಡ್ರು... ''ನೀವೂ ಈಗ ಹೇಗೂ ಸಾಹಿತ್ಯ ಲೋಕ್ದಲ್ಲೇ ಇದೀರ... ನೀವೂ ಬರೀರಿ... ಮಕ್ಕಳ ಸಾಹಿತ್ಯ ಬರೀರಪ್ಪ... ಮಕ್ಳಿಗೆ ಹಿಡಿಸೋ ಅಂಥಾದ್ದು, ಸುಲಭವಾಗಿ ಅವ್ರು ಓದೋ ಅಂಥಾದ್ದು ಬರ್ದು ಅವ್ರಿಗೆ ಓದಿನ ಹುಚ್ಚು ಹಿಡಿಸಿಬಿಡಬೇಕಪ್ಪ'' ಅಂದ್ರು. ಅವ್ರು ಹೊರಡೋ ಮುನ್ನ ಬೆನ್ನುತಟ್ಟಿ... 'ನಾ ಬರ್ತೀನಿ... ಒಂದ್ಸಾರಿ ನಮ್ಮನೆಗೆ ಬನ್ನಿ' ಅಂದ್ರು. ಅದಾದ್ಮೇಲೆ ಅನೇಕ್ಸಾರಿ ಅವ್ರನ್ನ ಗಾಂಧಿ ಸಾಹಿತ್ಯ ಸಂಘದಲ್ಲಿ ನೋಡಿದ್ದೆ. ಮಾತಾಡಿದ್ದೆ. ಆದ್ರೆ ಅವ್ರು ಇಹಲೋಕ ಯಾತ್ರೆ ಮುಗ್ಸಿದ್ ದಿನ ನಾನು ಊರಲ್ಲೇ ಇರ್ಲಿಲ್ಲ. ಹೀಗಾಗಿ ಅವ್ರ ಅಂತಿಮ ದರ್ಶನ ಕೂಡಾ ಮಾಡಕ್ಕಾಗ್ಲಿಲ್ಲ. ವಿಷಯ ತಿಳಿದಾಗ ಇದ್ದಲ್ಲಿಂದಲೇ ಶ್ರದ್ಧಾಂಜಲಿ ಸಲ್ಲಿಸಿದೆ.

★★★

ಈ ಸಂದರ್ಭದಲ್ಲಿ ರತ್ನನ ಪದಗಳ್ನ ಮೆಲುಕು ಹಾಕೋದು ಅವಶ್ಯಕ ಅನ್ಸುತ್ತೆ. ಯಾಕೇಂದ್ರೆ ಅದೊಂದ್ ಮೇರು ಕೃತಿ - ರತ್ನನ ಪದಗಳ ಮುಖಾಂತ್ರ ರಾಜರತ್ನಂ ಅವ್ರು ಜೀವನದ ಒಳಗೂ-ಹೊರಗೂ ಸುತ್ತಾಡಿದ್ದಾರೆ. ಮಾನವೀಯ ಸಂಬಂಧಗಳನ್ನು ಕೆದಕಿದ್ದಾರೆ, ಪತಿ ಪತ್ನಿಯರ ಸಂಬಂಧದ ತಿರುಳನ್ನ ಬಿಡಿಸಿಟ್ಟಿದ್ದಾರೆ. ಅದೊಂದು ಕೇವಲ ಸಾಹಿತ್ಯ ಕೃತಿಯಾಗಿರದೆ ಒಂದು ದಾರಿದೀಪವಾಗುಳಿದಿದೆ. ಜೀವನದ ಉದ್ದೇಶವನ್ನು ಸಾರುತ್ತಾ ಮನುಷ್ಯನ ಮಾತು ಹೇಗಿರಬೇಕು ಅನ್ನೊ ಮಾತ್ ಬಂದಾಗ ರಾಜರತ್ನಂ ಎಷ್ಟ್ ಸುಂದ್ರವಾಗಿ ಹೇಳಿದಾರೇಂದ್ರೆ:

ಮಾತ್ ಇರ್‌ಬೇಕು ಮಿಂಚ್ ಒಳದಂಗೆ
ಕೇಳ್ದೋರ್ ಹಾ! ಅನಬೇಕು
ಸೋನೆ ಯಾಡಿದ್ರೆ ಉಗದ್ ಅಂದಾರು
ಮುಚ್ಕೊಂಡ್ ಓಗೋ ಸಾಕು

ಮನ್ಸನ್ ಮಾತ್ ಅಂದ್ರ್ ಎಂಗ್ ಇರಬೇಕು
ಕವಣೆ ಕುರಿ ಇದ್ದಂಗೆ
ಕೇಳ್ದೋರ್ ಮಾತಿಗೆ ಲಗತ್ ಆಗಬೇಕು
ಮಕ್ಕಳ ಮುತ್ತ್ ಇದ್ದಂಗೆ

ಈ ಮಾತು ಬೇರೆಯವರಿಗಾಗಲೀ, ಸಮಾಜಕ್ಕಾಗಲೀ ಬರೆದದ್ದಲ್ಲ. ಸ್ವತಃ ಅವ್ರೇ ಪಾಲಿಸ್ತಿದ್ರು. ಅವ್ರ ಮಾತಲ್ಲಿ ಯಾರಿಗೂ ಬೇಸ್ರ ಬರ್ತಿರ್ಲಿಲ್ಲ. ಅವ್ರು ಯಾರಿಗೂ ನೋವುಂಟು ಮಾಡ್ತಿರ್ಲಿಲ್ಲ. ಅವರ ಮಾತಿನ ವೈಖರಿ ಅಂದ್ರೆ ಎಂಥಾ ಸೊಗಸು. ಅಲ್ಪ ಪ್ರಾಣಗಳ, ಮಾಹಪ್ರಾಣಗಳ ಕೊಲೆ ಆಗಬಾರ್ದು ಅಂತ ಬಹಳ ಎಚ್ರ ವಹಿಸ್ತಿದ್ರು. ಅವರ ಬದುಕೂ ಅಷ್ಟೆ ನಿರಾಡಂಬರ. ಬಹಳ ಸಾತ್ವಿಕ ಜೀವನ ನಡೆಸಿದವರು. ದೇವರ ಅಸ್ತಿತ್ವದ ಬಗೆಗಿನ ಅವರ ಅನಿಸಿಕೆ ಅದ್ಬುತ.

ದೇವ್ರ್ ಔನಂತೆ... ದೇವ್ರ್ ಇಲ್ವಂತೆ
ಯೇಳೋರ್ ಯೇಳ್ಲಿ ಅದಕ್ಕೇನಂತೆ
ದೇವ್ರ್ ಔನ್ ಅಂತ ನೆಂಕೊಳ್ಳಾದು
ನಮಗೆ ಜೀವ ಉಸುರು
ಔನಲ್ ನೆಮ್ಕೆ ಮಡಿಕ್ಕೊಳಾದು
ನಮಗೆ ನಮ್ದೆ ನೆಸರು

ಈ ನಂಬಿಕೆಯೇ ಅವರನ್ನು ಕಡೆಯವರೆವಿಗೂ ಉಳಿಸಿಕೊಂಡು ಬಂದಿತ್ತು.

ಕಡೆಯದಾಗಿ, ಅವರು ಮನುಷ್ಯ ಹೇಗೆ ಬದುಕಬೇಕೆಂಬುದನ್ನ ಎರಡೇ ಸಾಲಿನಲ್ಲಿ ಅದ್ಬುತವಾಗಿ ವಿವರಿಸಿದ್ದಾರೆ.

ಮಾನದ್ ಮುಂದೆ ಯಾವ್ದ್ ಏನೈತೆ
ಮಾನಕ್ ಬದುಕಬೇಕು ಮನ್ಸ

ಬದುಕಿಗೊಂದು ಗುರಿ, ಆ ಗುರಿಗೊಂದು ಸರಿಯಾದ ಮಾರ್ಗವನ್ನು ಕಂಡುಕೊಂಡು ಅದರಂತೆ ಬದುಕಿದ ರಾಜರತ್ನಂ ಅವರು ಕನ್ನಡ ಸಾಹಿತ್ಯಲೋಕ ಕಂಡ ಅನರ್ಘ್ಯರತ್ನಗಳಲ್ಲೊಂದು ಅಂದರೆ ಅದು ಅತಿಶಯೋಕ್ತಿಯಲ್ಲ.

# ಅಪರಂಜಿ ಕಲಾವಿದ ಕಂಡ ''ಗಳು'' ಗಳು

- ಬಾಗೂರು ಮಾರ್ಕಾಂಡೇಯ

(''ಗಳು'' ಗಳಲ್ಲಿ ಎಷ್ಟು ವಿಧ ಎಂದು ನಮ್ಮ ರೆಸಿಡೆಂಟ್ ಕಲಾವಿದ ಬಾಗೂರನ್ನು ಕೇಳಿದಾಗ ಆತ ಮರುತ್ತರ (ಮಾರುತ್ತರ?) ಕೊಡದೆ, ಈ ಕೆಳಗಿನ ಚಿತ್ರಗಳನ್ನು ಬರೆದು ಕೊಟ್ಟಿದ್ದಾನೆ. ಅವನ ಕಲ್ಪನೆಗೆ ನೀವೇನಾದರೂ ಸೇರಿಸುವುದಿದ್ದರೆ ಅಗತ್ಯವಾಗಿ ಬರೆದು ತಿಳಿಸಿ - ಸಂ.)



ಕಾರು ''ಗಳು''





ಬಸ್ಸು ''ಗಳು''





ಪ್ರೇಮಿ ''ಗಳು''

ಭಾಷಣ ''ಗಳು''



ಗಾಡಿ ''ಗಳು'' ಮತ್ತು ಬಾಡಿ ''ಗಳು''



ವಿಕೆಟ್ ''ಗಳು''



ಸೈಕಲ್ಲು ''ಗಳು''

**ವಿಂಟೇಜ್ ಕೊರವಂಜಿ**



ಇದೊಂದೇ ಸೀರೆ ಇರೋದು ಕೊಂಡು ಕೊಂಡುಬಿಡೀಮ್ಮಾ!
ನಿಮ್ಮ ಪಕ್ಕದಮನೆ ಪಾರ್ವತಮ್ಮನವರು ಆಗಲೇ ಬಂದು
ನೋಡಿಕೊಂಡು ಹೋದರು.

# ನಾ ಕಂಡಂತೆ ಜಿ.ಪಿ. ರಾಜರತ್ನಂ

– ಪ್ರೊ॥ ಎಂ.ಆರ್. ದೊರೆಸ್ವಾಮಿ

ಸುಮಾರು ವರ್ಷಗಳ ಹಿಂದಿನ ಮಾತು. ಕನ್ನಡದ ಬಗ್ಗೆ ಕನ್ನಡಿಗರಿಗೆ ಅನಾದರಣೆ ಇದ್ದ ಕಾಲ. ಜಿ.ಪಿ. ರಾಜರತ್ನಂ ಅವರು ಸೆಂಟ್ರಲ್ ಕಾಲೇಜಿನಲ್ಲಿ ಉಪನ್ಯಾಸ ನೀಡುತ್ತಿದ್ದಾರೆ. ತರಗತಿ ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿದೆ. ಆದರು ಸೂಜಿ ಕೆಳಗೆ ಬಿದ್ದರೆ ಕೇಳಿಸುವಷ್ಟು ತರಗತಿಯಲ್ಲಿ ನಿಶ್ಯಬ್ದ.

ಇದಕ್ಕೆ ಕಾರಣ, ಅವರಲ್ಲಿದ್ದಂತಹ ವಿದ್ವತ್ತು. ವಿಷಯದ ಬಗ್ಗೆ ವ್ಯಾಪ್ತಿ, ಕಂಚಿನ ಕಂಠ, ತರಗತಿ ತೆಗೆದುಕೊಳ್ಳುವ ಮುನ್ನ ಅವರು ನಡೆಸುತ್ತಿದ್ದ ಪೂರ್ವಸಿದ್ಧತೆ, ಅವರ ಜ್ಞಾನವನ್ನು ಬೇರೊಬ್ಬರೊಡನೆ ಹಂಚಿಕೊಳ್ಳುವ ಹಂಬಲ. ಈಗಿನ ಕೆಲವು ಉಪನ್ಯಾಸಕರಿಗೆ ಹೋಲಿಸಿದರೆ ಎಷ್ಟು ಗಾಢವಾದ ವ್ಯತ್ಯಾಸ?

ಜಿ.ಪಿ. ರಾಜರತ್ನಂ ಅವರು ರಾಷ್ಟ್ರೀಯ ಮಟ್ಟದ ಸಮ್ಮೇಳನಗಳಲ್ಲಿ ಮಾತ್ರ ಪಾಲ್ಗೊಳ್ಳದೆ ಚಿಕ್ಕ ಪ್ರಾಥಮಿಕ ಶಾಲೆಗಳಿಗೂ ಹೋಗಿ ಉಪನ್ಯಾಸ ನೀಡುತ್ತಿದ್ದರು. ಒಬ್ಬ ವಿದ್ವಾಂಸನಿಂದ, ಚಿಕ್ಕ ಮಗುವಿಗೂ ಅರ್ಥವಾಗುವ ರೀತಿಯಲ್ಲಿ ಮಾತನಾಡುತ್ತಿದ್ದ ಅಂಥವರು ಅತಿ ವಿರಳ.

**ಸಾಹಿತಿಯಾಗಿ:**

ತಾಳೆಗರಿಯಲ್ಲಿ ಕಷ್ಟಕರವಾದ ಪಾಳಿ ಭಾಷೆಯಲ್ಲಿ ಬರೆದಿದ್ದ ಬುದ್ಧನ ಉಪದೇಶಗಳನ್ನು ಓದಿ, ತರ್ಜುಮೆ ಮಾಡಿ, ಅದರ ಸಾರವನ್ನು ಜನಕ್ಕೆ ವಿವರಿಸುತ್ತಿದ್ದುದು ಅವರ ಒಂದು ಅಸಮಾನ್ಯ ಶಕ್ತಿ.

ದಯಾನಂದ (ಸಂಜೆ) ಕಾಲೇಜಿನಲ್ಲಿ, ನಾನು ಪ್ರಾಚಾರ್ಯನಾಗಿ ಅವರನ್ನು ಆಹ್ವಾನಿಸಿದಾಗಲೆಲ್ಲ ಬಂದು ವಿದ್ಯಾರ್ಥಿಗಳಿಗೆ ಜೈನ, ಬೌದ್ಧ ಧರ್ಮಗಳ ಬಗ್ಗೆ ತಿಳಿ ಭಾಷೆಯಲ್ಲಿ ಉಪನ್ಯಾಸ ನೀಡುತ್ತಿದ್ದರು. ನಂತರ, ನಾನು ಪಿ.ಇ.ಎಸ್. ಶಿಕ್ಷಣ ಸಂಸ್ಥೆ ಪ್ರಾರಂಭಿಸಿದ ಮೇಲೂ ವರ್ಷಕ್ಕೊಮ್ಮೆ ಬಂದು ಟಿ.ಪಿ. ಕೈಲಾಸಂ, ಡಿ.ವಿ.ಜಿ., ಗೋವಿಂದಪೈ ಮತ್ತು ಇತರ ಹಿರಿಯ ಸಾಹಿತಿಗಳ ಬಗ್ಗೆ ತಮ್ಮ ಕಂಚಿನ ಕಂಠದಿಂದ ಉಪನ್ಯಾಸ ಮಾಡಿ, ವಿದ್ಯಾರ್ಥಿಗಳಲ್ಲಿ ಅವರ ಬಗ್ಗೆ ಆಸಕ್ತಿ ಮೂಡಿಸುತ್ತಿದ್ದರು.

ವಿಶೇಷವೆಂದರೆ, ಅವರು ಬೌದ್ಧಿಕವಾಗಿ ಮಾತ್ರವಲ್ಲದೆ, ಶಾರೀರಿಕವಾಗಿಯೂ ಬಹಳ ಗಟ್ಟಿಮುಟ್ಟಾಗಿದ್ದಂತಹ ವ್ಯಕ್ತಿ. ಅವರ ಕಂಚಿನ ಕಂಠ ಅತಿ ವಿರಳ. ಅವರ ಕೊಡುಗೆಯೂ ಶುಭ್ರಖಾದಿ. ಸರಳ ವಸ್ತ್ರಧಾರಿ.

ವಿಶೇಷ ಕೊಡುಗೆ:

ಮಕ್ಕಳ ಸಾಹಿತ್ಯ ಅವರು ಜನತೆಗೆ ನೀಡಿರುವ ಒಂದು ವಿಶೇಷ ಕೊಡುಗೆ. ಶಾಲೆಗಳಿಗೆ ಹೋಗಿ, ಮಕ್ಕಳಿಗಾಗಿ ರಚಿಸಿದಂತಹ ಪದ್ಯಗಳನ್ನು ಓದಿ, ಕನ್ನಡ ಭಾಷೆ, ಸಂಸ್ಕೃತಿ, ಪರಂಪರೆಗಳ ಬಗ್ಗೆ ಅವರಲ್ಲಿ ಆಸಕ್ತಿ ಮೂಡಿಸುತ್ತಿದ್ದರು. ಮಕ್ಕಳಿಂದ, ವೃದ್ಧರ ತನಕ ಯಾವ ಹಂತಕ್ಕೆ ಬೇಕಾದರೂ ಏರಬಲ್ಲ ಹಾಗೂ ಇಳಿಯಬಲ್ಲ ಸಾಮರ್ಥ್ಯ ಹೊಂದಿದ್ದರು. ನನಗೆ ತಿಳಿದ ಹಾಗೆ ಅವರಿಗಿದ್ದಂತಹ ಜ್ಞಾನ ಭಂಡಾರವನ್ನು ಜನ ಸಮುದಾಯದೊಡನೆ ಹಂಚಿಕೊಳ್ಳಲು ಅವರಿಗಿದ್ದ ಕಾಳಜಿ, ಇನ್ನೊಬ್ಬ ಸಾಹಿತಿ. ಶಿಕ್ಷಕನಲ್ಲಿ ನಾನು ಕಂಡಿಲ್ಲ. ವಾರಪತ್ರಿಕೆಗಳಲ್ಲಿ ಜಾತಕ ಕತೆಯನ್ನು ಬರೆಯಲು ಪ್ರಾರಂಭಿಸಿದ್ದಲ್ಲದೆ ನೂರಾರು ಪದ್ಯಗಳನ್ನು ರಚಿಸಿರುವ ಖ್ಯಾತಿ ಅವರಿಗೆ ಸಲ್ಲುತ್ತದೆ.

ಕನ್ನಡದ ಹೋರಾಟ ನಡೆಸಿದವರಿಗಿಂತ ಹೆಚ್ಚಿನ ಸೇವೆ ಸಲ್ಲಿಸಿ, ಕನ್ನಡದ ಹಿರಿಮೆಯನ್ನು ಹೆಚ್ಚಿಸಿರುವುದು ಗಮನಿಸಿದರೆ, ಇವರು ಕನ್ನಡಕ್ಕೆ ನೀಡಿರುವ ಇನ್ನೊಂದು ಮಹತ್ವದ ಕೊಡುಗೆ.

ಅವರು ಪುಟ್ಟಣ್ಣ ಪುರಭವನದಲ್ಲಿ ನಡೆದ ಒಂದು ಸಮಾರಂಭದಲ್ಲಿ ಭಾಷಣ ಮಾಡುತ್ತಿದ್ದಾಗ, ''ಜನಸಾಮಾನ್ಯರು ನನ್ನ ಕೃತಿ. ವ್ಯಕ್ತಿತ್ವ ಕುರಿತು ಹೊಗಳಿದರೆ, ತೂಕ ಜಾಸ್ತಿಯಾಗುವುದಿಲ್ಲ, ತೆಗಳಿದರೆ ತೂಕ ಕಡಿಮೆಯಾಗುವುದಿಲ್ಲ'' ಎಂದು ನುಡಿದರು.

ಜಿ.ಪಿ. ರಾಜರತ್ನಂ ಅವರು ಒಂದು ಟೀಕೆಗೆ ಗುರಿಯಾಗಿದ್ದರು. ಸಾಹಿತಿಗಳು, ವಿಮರ್ಶಕರೆಲ್ಲರೂ ಅವರ ಒಂದು ಗುಣವನ್ನು ಟೀಕಿಸುತ್ತಿದ್ದರು. ರಾಜರತ್ನಂ ಅವರು ಯಾವುದೇ ಸಮಾರಂಭಕ್ಕೆ, ಶಾಲೆಗೆ, ಭೇಟಿ ನೀಡಿದರು ನೂರು ರೂಪಾಯಿ ಮೌಲ್ಯದ ಪುಸ್ತಕವನ್ನು ಖರೀದಿಸುವಂತೆ ನಿಬಂಧನೆ ಒಡ್ಡುತ್ತಿದ್ದರು. ನಮ್ಮ ಶಿಕ್ಷಣ ಸಂಸ್ಥೆಗೆ ಅವರನ್ನು ಹಲವಾರು ಬಾರಿ ಆಹ್ವಾನಿಸಿದಾಗ ನಾವು ಅದರಿಂದ ಖರೀದಿಸಿದ ಕನ್ನಡ ಪುಸ್ತಕಗಳ ಸಂಖ್ಯೆ ಹೆಚ್ಚಿತು. ಇದರಿಂದ ನಮ್ಮ ಗ್ರಂಥ ಭಂಡಾರ ಸಮೃದ್ಧವಾಯಿತು. ಇದರಲ್ಲಿ ತಪ್ಪೇನಿದೆ?

ಹೀಗೆ ರಾಜರತ್ನಂ ಜೀವನದುದ್ದಕ್ಕೂ, ಒಬ್ಬ ಆದರ್ಶ ಶಿಕ್ಷಕನಾಗಿ, ಸಾಹಿತ್ಯದ ಪರಿಚಾರಿಕೆ ನಡೆಸಿದರು; ಸರಳತೆ, ಪಾಂಡಿತ್ಯಗಳ ಪ್ರತೀಕ ಎನ್ನುವಂತೆ ಬಾಳಿದರು. ಅವರ ಸ್ಮರಣೆ ಕನ್ನಡಿಗರಿಗೆಲ್ಲ ಸ್ಫೂರ್ತಿ ನೀಡುವಂಥದು.



ಶ್ರೀಮತಿ ಶಾಂತಾ ಮತ್ತು ಶ್ರೀ ಸಿ. ಆರ್. ರಘು

**ಇವರ ಸವಿನೆನಪಿಗೆ**

ಪೂರ್ಣಿಮಾ ರಘು ಗೌಡ – ಸುಧೀರ್‌ಗೌಡ

ಶ್ರೀಹರಿ ಕದಾಂಬಿ.

Reg. No.: BGW - 180




ಮೋಹಕ, ಸುಂದರ ಹಾಗೂ ಆಕರ್ಷಣೀಯ ಸ್ವರ್ಣ ಕ್ವಾರ್ಟ್ಜ್ ಗಡಿಯಾರಗಳು ಎಚ್‌ಎಮ್‌ಟಿಯವರಿಂದ ಕಂಗೊಳಿಸುವ ಗೋಲ್ಡ್ ಪ್ಲೇಟೆಡ್ ನೊಂದಿಗೆ, ನಿಮಗಾಗಿ ಕೇವಲ ರೂ. 555/-ಕ್ಕೆ!

ಇದಲ್ಲದೆ, ಎಚ್‌ಎಮ್‌ಟಿಯ ಬೃಹತ್ ಶ್ರೇಣಿಯಲ್ಲಿ ಆಟೋಮ್ಯಾಟಿಕ್ ಹಾಗೂ ಮೆಕ್ಯಾನಿಕಲ್ ಕೈಗಡಿಯಾರಗಳು, ಎಲ್ಲರ ಕೈಗೆ ಎಟಕುವ ಬೆಲೆಗಳಲ್ಲಿ, ವಿವಿಧ ಶೈಲಿಗಳಲ್ಲಿ ದೊರೆಯುತ್ತವೆ.

# ಒಂದು ಸುಂದರ ಗೋಲ್ಡ್ ಪ್ಲೇಟೆಡ್ ಗಡಿಯಾರ ಕೇವಲ ರೂ. 555/-ಕ್ಕೆ



Swarna
QUARTZ
from
hmt

ಹೆಚ್ಚಿನ ವಿವರಗಳಿಗೆ ಈ ಕೂಪನ್‌ನ್ನು ಭರ್ತಿ ಮಾಡಿ ಇವರಿಗೆ ಕಳುಹಿಸಿ.
ದಿ ಜನರಲ್ ಮಾರ್ಕೆಟಿಂಗ್ ಮ್ಯಾನೇಜರ್ (ಗಡಿಯಾರಗಳು),
ಎಚ್‌ಎಮ್‌ಟಿ ಲಿಮಿಟೆಡ್, 59, ಬಳ್ಳಾರಿ ರಸ್ತೆ, ಬೆಂಗಳೂರು-560 032
ದೂರವಾಣಿ: 3335032 ಫ್ಯಾಕ್ಸ್: 3338950

* ಗರಿಷ್ಠ ಮಾರಾಟ ಬೆಲೆ.
ನಗದು ಖರೀದಿಯ ಮೇಲೆ ವಿಶೇಷ ರಿಯಾಯಿತಿ.

**ಹೌದು,** ನಾನು ಎಚ್‌ಎಮ್‌ಟಿ ಗಡಿಯಾರಗಳನ್ನು ಖರೀದಿಸಲು ಬಯಸುತ್ತೇನೆ. ದಯವಿಟ್ಟು ನಿಮ್ಮ ಸೇಲ್ಸ್ ಎಕ್ಸಿಕ್ಯೂಟಿವ್ ಅವರನ್ನು ಕಳುಹಿಸಿಕೊಡಿ

ಹೆಸರು : ____________ ವಿಳಾಸ : ____________

ಸಂಸ್ಥೆ : ____________ ಹುದ್ದೆ : ____________ ದೂರವಾಣಿ : ____________

MASS/HMT/128

Printed by V.R. NATH for the Publisher M. SHIVAKUMAR, Published and owned by M. SHIVA KUMAR, 36, 6th Main Road, Malleswaram Bangalore - 560 003. Printed at RAVI GRAPHICS, 62, 4th Cross, SSI Area, Rajajinagar, Bangalore 560 010.
Editor : M. SHIVAKUMAR